ಯಕ್ಷ – ಹಾಂ, ... ನೀನು ಕೇಳಿದ್ದು ಸರಿಯೇ. ನನ್ನ ಪ್ರಶ್ನೆಗಳಿಗೆ ಸರಿಯಾಗಿ ಉತ್ತರಿಸಿದರೆ ಸತ್ತಿರುವ ನಿನ್ನ ತಮ್ಮಂದಿರಲ್ಲಿ ಒಬ್ಬನನ್ನು ಬದುಕಿಸಿ ಕೊಡುತ್ತೇನೆ.

ಧರ್ಮರಾಜ – ಆಗಲಿ. ನಿನ್ನ ಮಾತನ್ನು ನಂಬುತ್ತೇನೆ. ಏನು ಪ್ರಶ್ನೆಗಳನ್ನು ಕೇಳಲಿಚ್ಛಿಸುವೆಯೋ ಕೇಳು.

ಯಕ್ಷ – ಧರ್ಮರಾಜ, ಹೇಳು ಭೂಮಿಗಿಂತ ದೊಡ್ಡ ವಸ್ತು ಯಾವುದು?

ಧರ್ಮರಾಜ – ಭೂಮಿಗಿಂತ ದೊಡ್ಡ ವಸ್ತು ತಾಯಿ.

ಯಕ್ಷ – ಸರಿ. ಹಾಗಾದರೆ ಆಕಾಶಕ್ಕಿಂತ ಉನ್ನತ ವಸ್ತು ಯಾವುದು?

ಧರ್ಮರಾಜ – ಕೇಳು ಯಕ್ಷನೇ, ಪ್ರಪಂಚದಲ್ಲಿ ಆಕಾಶಕ್ಕಿಂತ ಉನ್ನತ ವಸ್ತುವೊಂದಿದ್ದರೆ ಅದು ತಂದೆ.

ಯಕ್ಷ – ಸರಿಯಾಗಿ ಹೇಳಿದೆ. ಈಗ ಹೇಳು, ಗಾಳಿಗಿಂತ ವೇಗವಾದದ್ದು ಯಾವುದು?

ಧರ್ಮರಾಜ – ಯಕ್ಷ, ಗಾಳಿಯೇ ಅತ್ಯಂತ ವೇಗವಾದದ್ದು ಎಂದುಕೊಂಡರೆ, ಮನುಷ್ಯನ ಮನಸ್ಸು ಅದನ್ನೂ ಮೀರಿದ್ದು. ಅದು ಗಾಳಿಗಿಂತಲೂ ವೇಗವಾದದ್ದು.

ಯಕ್ಷ – ಭಲೇ ರಾಜ! ಭಲೇ!, ಗಾಳಿಗಿಂತಲೂ ವೇಗವಾದ ಮನಸ್ಸನ್ನು ಹೊಂದಿದ ಆ ಮನುಷ್ಯನನ್ನು ಅತಿಯಾಗಿ ಕಾಡುವುದು ಯಾವುದು?

ಧರ್ಮರಾಜ – (ಸ್ವಲ್ಪ ಚಿಂತಿಸಿ) ಮಹಾತ್ಮನೇ ಮನುಷ್ಯನನ್ನು ಅತಿಯಾಗಿ ಕಾಡುವುದು ಚಿಂತೆ.

ಯಕ್ಷ – ಒಪ್ಪಿದೆ ಧರ್ಮರಾಜ ಒಪ್ಪಿದೆ. ಸ್ವರ್ಗಕ್ಕಾಗಿ ಮನುಷ್ಯ ಆಸೆ ಪಡುತ್ತಾನೆ. ಅದರೆ ಅವನಿಗೆ ಸ್ವರ್ಗ ಸಿಗುವುದು ಯಾವುದರಿಂದ?

ಧರ್ಮರಾಜ – ಸ್ವರ್ಗವೇ? . . ಯಕ್ಷ, ಸತ್ಯ ಮಾರ್ಗದಿಂದ ಸ್ವರ್ಗ ಸಿಗುವುದಲ್ಲದೆ ಬೇರೆ ಏನೂ ದಾರಿಯಿಲ್ಲ.

ಯಕ್ಷ – ಸರಿಯಾಗಿ ಹೇಳಿದೆ ರಾಜ, ಸರಿಯಾಗಿ ಹೇಳಿದೆ. ಈಗ ಹೇಳು, ಧನಗಳಲ್ಲಿ ಅತ್ಯಂತ ಉತ್ತಮ ಧನ ಯಾವುದು?

ಧರ್ಮರಾಜ – ಉತ್ತಮವಾದ ಪ್ರಶ್ನೆ ಕೇಳಿದೆ ನೀನು. ವಿದ್ಯಾಧನವೇ ಎಲ್ಲಾ ಧನಗಳಿಗಿಂತ ಉತ್ತಮವಾದುದು. ಸರ್ವಶ್ರೇಷ್ಠವಾದ ಧನ.

ಯಕ್ಷ – ಬಹಳ ಸಂತೋಷ. ಧರ್ಮರಾಜ, ನೀನು ಗಮನಿಸಿರುವೆಯಾ, ಮನುಷ್ಯನಿಗೆ ಲಾಭವೇ ಮುಖ್ಯ. ಜೀವನದಲ್ಲಿ ಉತ್ತಮವಾದ ಲಾಭವೇನಾದರೂ ಇದ್ದರೆ, ಅದು ಯಾವುದು?

ಧರ್ಮರಾಜ – ಗಮನಿಸಿದ್ದೇನೆ, ಮಹಾತ್ಮ, ಜೀವನದಲ್ಲಿ ಉತ್ತಮವಾದ ಲಾಭವೆಂದರೆ ಅದು ಆರೋಗ್ಯ ಭಾಗ್ಯ.

ಯಕ್ಷ – ಭಲೇ!, ಧರ್ಮರಾಜ ಸರಿಯಾಗಿ ಉತ್ತರಿಸಿದೆ. ಈಗ ಹೇಳು. ಯಾವುದನ್ನು ಬಿಟ್ಟರೆ ವ್ಯಕ್ತಿ ಜನರಿಗೆ ಪ್ರಿಯನಾಗುವನು?

ಧರ್ಮರಾಜ – ಮಹಾತ್ಮನೇ ಕೇಳು. ವ್ಯಕ್ತಿ ಗರ್ವವನ್ನು ಬಿಟ್ಟರೆ ಜನರಿಗೆ ಪ್ರಿಯನಾಗುತ್ತಾನೆ.

ಯಕ್ಷ – ಒಪ್ಪಿದೆ ಧರ್ಮರಾಜ ನಿನ್ನ ಧರ್ಮಪ್ರಜ್ಞೆಯನ್ನು. ಎಲ್ಲಾ ಸುಖ ಭೋಗಗಳಿದ್ದೂ ಯಾವಾಗಲೂ ದುಃಖಿಯಾಗಿರುವವನು ಯಾರು?

ಧರ್ಮರಾಜ – ಕೇಳು ಯಕ್ಷ, ಪರರ ಏಳಿಗೆಯನ್ನು ಸೈರಿಸಲಾರದವನೇ ಯಾವಾಗಲೂ ದುಃಖಿ. (ಯಕ್ಷ ಇನ್ನೂ ಅನೇಕ ಪ್ರಶ್ನೆಗಳನ್ನು ಕೇಳುತ್ತಾನೆ. ಅದಕ್ಕೆಲ್ಲಾ ತಾಳ್ಮೆಯಿಂದ ಧರ್ಮರಾಜ ಉತ್ತರ ಕೊಡುತ್ತಾನೆ. ಯಕ್ಷ ತೃಪ್ತನಾಗುವನು.)

ಯಕ್ಷ – ಭಲೇ ಧರ್ಮರಾಜ, ಭಲೇ, ನೀನು ಹೆಸರಿಗೆ ತಕ್ಕಂತೆ ಧರ್ಮರಾಜನೇ ಸರಿ. ಮೆಚ್ಚಿದೆ ನಿನ್ನ ಬುದ್ಧಿವಂತಿಕೆಯನ್ನು. ನಿನ್ನ ಉತ್ತರಗಳನ್ನು ಕೇಳಿ ಬಹಳ ಸಂತೋಷವಾಗಿದೆ. ನಿನ್ನ ನಾಲ್ವರು ಸಹೋದರರಲ್ಲಿ ಯಾರಾದರು ಒಬ್ಬರನ್ನು ಬದುಕಿಸುವೆ. ಹೇಳು, ಯಾರನ್ನು ಬದುಕಿಸಲಿ?

ಧರ್ಮರಾಜ – (ಯಕ್ಷನಿಗೆ ಕೈ ಮುಗಿದು) ಧನ್ಯನಾದೆ. ನಾಲ್ವರಲ್ಲಿ ಒಬ್ಬನನ್ನು ಬದುಕಿಸುವುದಾದರೆ, ನನ್ನ ತಮ್ಮ ನಕುಲನನ್ನು ಬದುಕಿಸು.

ಯಕ್ಷ – (ಆಶ್ಚರ್ಯದಿಂದ) ಇದೇನು ಧರ್ಮರಾಜ, ಹೀಗೆ ಹೇಳುತ್ತಿರುವೆ? ಅವಸರ ಪಡಬೇಡ. ಸ್ವಲ್ಪ ಯೋಚಿಸು. ವೀರರಾದ ಭೀಮ, ಅರ್ಜುನರು ನಿನಗೆ ಪ್ರಿಯರಲ್ಲವೇ? ಅವರನ್ನು ಬಿಟ್ಟು ನಕುಲನನ್ನು ಬದುಕಿಸಲು ಹೇಳುತ್ತಿರುವಿಯಲ್ಲಾ! ಮತ್ತೊಮ್ಮೆ ಯೋಚಿಸು.

ಧರ್ಮರಾಜ – ಪೂಜ್ಯನೇ, ನಾನು ಚೆನ್ನಾಗಿ ಯೋಚಿಸಿದ್ದೇನೆ. ನನಗೆ ಇಬ್ಬರು ತಾಯಂದಿರು. ಕುಂತಿ ಮತ್ತು ಮಾದ್ರಿ. ಕುಂತಿಯ ಮಕ್ಕಳಲ್ಲಿ ನಾನು ಜೀವಂತವಾಗಿರುವೆ. ಈಗ ಮಾತೆ ಮಾದ್ರಿಯ ಮಕ್ಕಳಲ್ಲಿ ಒಬ್ಬನಾದ ನಕುಲನನ್ನು ಬದುಕಿಸಿಕೊಳ್ಳುವುದು ನ್ಯಾಯವಲ್ಲವೇ? ನೀನೇ ಹೇಳು.

ಯಕ್ಷ – ಧರ್ಮರಾಜ, ಮೆಚ್ಚಿದೆ ನಿನ್ನ ನ್ಯಾಯ ನಿಷ್ಠೆಯನ್ನು, ಸಹೋದರ ಪ್ರೀತಿಯನ್ನು. ನಕುಲನೊಬ್ಬನೇ ಏಕೆ? ನಿನ್ನ ಎಲ್ಲಾ ತಮ್ಮಂದಿರೂ ಬದುಕಲಿ. (ಯಕ್ಷನ ಕೃಪೆಯಿಂದ ಸತ್ತುಬಿದ್ದಿದ್ದ ನಾಲ್ವರೂ ನಿದ್ದೆಯಿಂದ ಎದ್ದವರಂತೆ ಎದ್ದು ಕುಳಿತು, ಆಶ್ಚರ್ಯದಿಂದ ಯಕ್ಷನನ್ನೂ ಧರ್ಮರಾಜನನ್ನೂ ನೋಡುವರು.)

ಧರ್ಮರಾಜ – ಕೃತಾರ್ಥನಾದೆ ದೇವ, ನಾನು ಕೃತಾರ್ಥನಾದೆ. ನೀನು ಸಾಮಾನ್ಯ ಯಕ್ಷನಲ್ಲ. ಯಾರೋ ದೇವತೆಯೇ ಆಗಿರಬೇಕು. ದಯವಿಟ್ಟು ನಿನ್ನ ನಿಜರೂಪವನ್ನು ತೋರಿಸು.

ಯಕ್ಷ – ಹೌದು ಧರ್ಮರಾಜ, ನಾನು ಯಕ್ಷನಲ್ಲ. ನಿನ್ನ ತಂದೆ ಯಮಧರ್ಮ. ನಿನ್ನನ್ನು ಪರೀಕ್ಷಿಸಲು ಬಂದಿದ್ದೆ. ನಿನ್ನ ಧರ್ಮಪ್ರಜ್ಞೆ, ನ್ಯಾಯನಿಷ್ಠೆ, ಸೋದರ ಪ್ರೇಮದಿಂದ ಸಂತುಷ್ಟನಾಗಿದ್ದೇನೆ. ನಿನಗೆ ಮತ್ತೇನು ವರ ಬೇಕೋ ಕೇಳು. ಕೊಡುತ್ತೇನೆ.

( ಸಹೋದರರೆಲ್ಲರೂ ಯಕ್ಷನಿಗೆ ನಮಸ್ಕರಿಸುವರು)

ಧರ್ಮರಾಜ – ಧನ್ಯನಾದೆ ತಂದೆ, ಧನ್ಯನಾದೆ. ನಿನ್ನ ದರ್ಶನದಿಂದ ನನ್ನ ಜೀವನ ಪಾವನವಾಯಿತು. ನಾವೆಲ್ಲ ಆ ಬ್ರಾಹ್ಮಣನ ಅರಣಿಗೋಸ್ಕರ ಜಿಂಕೆಯನ್ನು ಬೆನ್ನಟ್ಟಿ ಬಂದದ್ದು. ಅದನ್ನು ಆ ಬ್ರಾಹ್ಮಣನಿಗೆ ದೊರೆಕಿಸಿಕೊಟ್ಟು ನಮ್ಮ ಮಾತು ಉಳಿಸಿಕೊಳ್ಳಬೇಕು. ದಯವಿಟ್ಟು ಅದು ದೊರಕುವಂತೆ ಮಾಡುವೆಯಾ?

ಯಕ್ಷ – (ನಗುತ್ತಾ) ಓಹೋ, ಅರಣಿಯೋ?, . . ಅದನ್ನು ನಾನೇ ಜಿಂಕೆಯ ರೂಪದಲ್ಲಿ ಹೋಗಿ ಎತ್ತಿಕೊಂಡು ಬಂದಿದ್ದೆ. ಇದೋ ತೆಗೆದುಕೋ. (ಅರಣಿಯನ್ನು ಧರ್ಮರಾಜನ ಕೈಗೆ ಕೊಡುವನು)

ಎಲ್ಲರೂ – ಧನ್ಯರಾದೆವು ತಂದೆ, ನಮ್ಮನ್ನು ಆಶೀರ್ವದಿಸಿ. (ಎಲ್ಲರೂ ನಮಸ್ಕರಿಸುವರು)

ಯಕ್ಷ – ನಿಮಗೆಲ್ಲರಿಗೂ ಶುಭವಾಗಲಿ. ಜಯಶಾಲಿಗಳಾಗಿ, ಕೀರ್ತಿವಂತರಾಗಿ ಬಾಳಿ.

* * * * * *

### ಓದಿ ತಿಳಿಯಿರಿ

**ಬಳಲು** – ಆಯಾಸಗೊಳ್ಳು; **ಸರೋವರ**– ನೀರಿನ ತಾಣ;
**ಅಪ್ಪಣೆ**– ಅನುಮತಿ, ಒಪ್ಪಿಗೆ; **ಧಿಕ್ಕರಿಸು**– ತಿರಸ್ಕರಿಸು; **ಉನ್ನತ**– ಶ್ರೇಷ್ಠ, ಮೇಲು ಮಟ್ಟದ;
**ವನ**– ಕಾಡು, ಅರಣ್ಯ, ಅಡವಿ, ಪೀಡಿಸು; **ಧನ**–ಹಣ; **ಪ್ರಿಯ**– ಇಷ್ಟವಾದ; **ಗರ್ವ**– ಅಹಂಕಾರ; **ಇಚ್ಛೆ**– ಇಷ್ಟ; **ಏಳ್ಗೆ**– ಅಭಿವೃದ್ಧಿ; **ಸೈರಿಸು**– ಸಹಿಸು



### ಗಮನಿಸಿ ತಿಳಿಯಿರಿ

**ಅರಣಿ**– ಯಜ್ಞಕ್ಕೆ ಬೆಂಕಿ ಹುಟ್ಟಿಸಲು ಬಳಸುವ ಮರದ ತುಂಡು. **ಜೂಜು**– ಪಣವಿಟ್ಟು ಆಡುವ ಆಟ; **ಗೂಢಚಾರ**– ಗುಟ್ಟಾಗಿ ಮಾಹಿತಿ ಸಂಗ್ರಹಿಸುವವ, ಬೇಹುಗಾರ. **ಯಕ್ಷರು** – ದೇವತೆಗಳಲ್ಲಿ ಒಂದು ವರ್ಗ; **ವನವಾಸ**– ಕಾಡಿನಲ್ಲಿ ವಾಸಿಸುವುದು; **ಕೃತಾರ್ಥ**– ಧನ್ಯತೆಯ ಭಾವ.

## ಅಭ್ಯಾಸ ಚಟುವಟಿಕೆ

**ಅ) ಈ ಕೆಳಗಿನ ಪ್ರತಿಯೊಂದು ಪ್ರಶ್ನೆಗೂ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಪಾಂಡವರು ವನವಾಸಕ್ಕೆ ಬರಲು ಕಾರಣವೇನು?

೨. ನಕುಲ ಸರೋವರಕ್ಕೆ ಏಕೆ ಹೋದನು?

೩. ಗಾಳಿಗಿಂತ ವೇಗವಾದುದು ಯಾವುದು?

೪. ಎಲ್ಲಕ್ಕಿಂತ ಉತ್ತಮವಾದ ಧನ ಯಾವುದು?

೫. ಧರ್ಮರಾಜನಿಗೆ ಪ್ರಶ್ನೆಗಳನ್ನು ಕೇಳಿದ ಯಕ್ಷ ಯಾರು?

೬. ಧರ್ಮರಾಜ ತನ್ನ ಸಹೋದರರಲ್ಲಿ ಯಾರನ್ನು ಬದುಕಿಸಲು ಕೇಳಿದ?

**ಆ) ಈ ಕೆಳಗಿನ ಪ್ರತಿಯೊಂದು ಪ್ರಶ್ನೆಗೂ ಮೂರು-ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಪಾಂಡವರು ಜಿಂಕೆಯನ್ನು ಬೆನ್ನಟ್ಟಿದ್ದು ಏಕೆ?

೨. ಧರ್ಮರಾಜನ ತಮ್ಮಂದಿರೆಲ್ಲ ಸಾಯಲು ಕಾರಣವೇನು?

೩. ಸ್ವರ್ಗ ಮತ್ತು ಲಾಭದ ಬಗೆಗೆ ಧರ್ಮರಾಜನ ಉತ್ತರವೇನು?

೪. ಯಕ್ಷನು ಏಕೆ ಸಂತುಷ್ಟನಾದ?

**ಇ) ಸಂದರ್ಭ ಸಹಿತ ವಿವರಿಸಿರಿ.**

೧. 'ಅಯ್ಯೋ ವಿಧಿಯೇ, ಇದೇನು ಅನ್ಯಾಯವಾಯಿತು?'

೨. 'ಮೊದಲು ನೀರು ಕುಡಿದು ಸಾಯುವೆಯೋ, ಇಲ್ಲಾ ನನ್ನ ಪ್ರಶ್ನೆಗೆ ಉತ್ತರ ಹೇಳಿ ಬದುಕುವೆಯೋ?'

೩. 'ಮನುಷ್ಯನನ್ನು ಅತಿಯಾಗಿ ಕಾಡುವುದೇ ಚಿಂತೆ'.

೪. 'ಪರರ ಏಳಿಗೆಯನ್ನು ಸೈರಿಸಲಾರದವನೇ ದುಃಖಿ.'

೫. 'ನನಗೆ ಇಬ್ಬರು ತಾಯಂದಿರು.'

**ಈ) ಈ ಕೆಳಗಿನ ಪದಗಳನ್ನು ಬಿಡಿಸಿ ಬರೆದು, ಸಂಧಿಯ ಹೆಸರು ತಿಳಿಸಿರಿ.**

೧. ಇದೇನು ೨. ಅಲ್ಲಿಂದಿಲ್ಲಿಗೆ ೩. ಮಾತನ್ನು ೪. ರೂಪದಲ್ಲಿದ್ದ

**ಉ) ಈ ಕೆಳಗೆ ಕೊಟ್ಟಿರುವ ಪಟ್ಟಿಯಲ್ಲಿನ ಪದಗಳನ್ನು ಜೋಡಿಸಿ ಅರ್ಥಪೂರ್ಣ ವಾಕ್ಯಗಳನ್ನು ರಚಿಸಿರಿ.**

**ಮಾದರಿ: ಕಮಲ ಪುಸ್ತಕವನ್ನು ಕೊಂಡಳು.**

| ಕರ್ತೃ | ಕರ್ಮ | ಕ್ರಿಯಾಪದ |
|---|---|---|
| ಕಮಲ | ನೀರನ್ನು | ತಿಂದರು |
| ಹುಡುಗರು | ಪುಸ್ತಕವನ್ನು | ಹಿಡಿಯಿತು |
| ಮಹೇಶ | ಇಲಿಯನ್ನು | ಕೊಂಡಳು |
| ಬೆಕ್ಕು | ಹಣ್ಣುಗಳನ್ನು | ತಂದನು |

## ಪ್ರಾಯೋಗಿಕ ಚಟುವಟಿಕೆ

**ಅ)** ಯಕ್ಷ ಪ್ರಶ್ನೆಯ ಈ ಪ್ರಸಂಗವನ್ನು ವೇಷಭೂಷಣಗಳೊಂದಿಗೆ ತರಗತಿಯಲ್ಲಿ ಅಭಿನಯಿಸಿರಿ.

ಬ) ಮಹಾಭಾರತದ ಕತೆಯನ್ನು ಓದಿ ತಿಳಿಯಿರಿ.

**ಕ) ಈ ಕೆಳಗಿನ ಕಥಾಭಾಗವನ್ನು ಸಂಭಾಷಣೆಯ ರೂಪದಲ್ಲಿ (ನಾಟಕ ರೂಪ) ಬರೆಯಿರಿ.**

ಒಮ್ಮೆ ಮನುಷ್ಯನೊಬ್ಬ ಮೈ ತುಂಬಾ ಕಂಬಳಿ ಹೊದ್ದುಕೊಂಡು ಹೊರಟಿದ್ದ. ಅವನನ್ನು ನೋಡಿದ ಮಾರುತ ಸೂರ್ಯನ ಬಳಿಗೆ ಬಂದು, ನೀನು ಬೆಳಕು, ಶಾಖ ಕೊಡುವ ದೇವರು. ನಾನು ಗಾಳಿ ಕೊಡುವೆ. ನಮ್ಮಿಬ್ಬರಲ್ಲಿ ಯಾರು ಬಲಶಾಲಿಗಳೆಂದು ಇವತ್ತು ತಿಳಿಯೋಣ ಎಂದು ಹೇಳಿದ. ಅದಕ್ಕೆ ಸೂರ್ಯ ಅದನ್ನು ಹೇಗೆ ನಿರ್ಧರಿಸುವುದು ಎಂದ. ಅದಕ್ಕೆ ಮಾರುತ, ಅದು ಹೇಗೆಂದರೆ, ಯಾರು ಆ ಮನುಷ್ಯ ಹೊದ್ದುಕೊಂಡ ಕಂಬಳಿಯನ್ನು ಬೀಳಿಸುತ್ತಾರೋ ಅವರೇ ಬಲಶಾಲಿಗಳು ಎಂದನು. ಸೂರ್ಯ ಒಪ್ಪಿಗೆ ಸೂಚಿಸಿದ.

ಮಾರುತ ಮನುಷ್ಯನ ಸಮೀಪಕ್ಕೆ ಬಂದು ಜೋರಾಗಿ ಗಾಳಿ ಬೀಸ ತೊಡಗಿದ. ಗಾಳಿಯಿಂದ ಚಳಿ ಹೆಚ್ಚಾಗಿ ಮನುಷ್ಯ ಬಿಗಿಯಾಗಿ ಕಂಬಳಿ ಹೊದ್ದುಕೊಂಡ. ಮಾರುತ ಮಾಡಿದ ಪ್ರಯತ್ನ ಫಲಿಸಲಿಲ್ಲ. ಸೋತು ಕುಳಿತ. ನಂತರ ಸೂರ್ಯನ ಸರದಿ. ಸೂರ್ಯ ತನ್ನ ಕಿರಣಗಳನ್ನು ಪ್ರಖರವಾಗಿ ಹರಡಿದ. ಬಿಸಿಲು ಹೆಚ್ಚಾಗತೊಡಗಿತು. ಸೆಖೆ ತಾಳಲಾರದೆ ಮನುಷ್ಯ ತನ್ನ ಕಂಬಳಿ ತೆಗೆದು ಕೆಳಕ್ಕೆ ಹಾಕಿದ. ಇದನ್ನು ನೋಡಿ ಮಾರುತ ಸೂರ್ಯನ ಬಳಿ ಬಂದು ನಾನು ಸೋತೆ, ನೀನು ನಿಜಕ್ಕೂ ನನಗಿಂತ ಬಲಶಾಲಿ, ನೀನೇ ಗೆದ್ದೆ ಎಂದ. ಆಗ ಸೂರ್ಯ ಇಲ್ಲ ಯಾರೂ ಹೆಚ್ಚೂ ಇಲ್ಲ ಅಥವಾ ಕಡಿಮೆಯೂ ಇಲ್ಲ. ಅವರವರ ಕೆಲಸ ಅವರಿಗೆ ಮುಖ್ಯ ಎಂದನು.



## ವ್ಯಾಕರಣಾಭ್ಯಾಸ

### ಆಗಮ ಸಂಧಿ

ಹಸು + ಅನ್ನು– ಹಸುವನ್ನು

ಮನೆ + ಇಂದ– ಮನೆಯಿಂದ

ಈ ಮೇಲಿನ ಉದಾಹರಣೆಗಳನ್ನು ಗಮನಿಸಿ. ಇಲ್ಲಿ ಸ್ವರಕ್ಕೆ ಸ್ವರ ಪರವಾಗಿದೆ. (ಉ+ಅ, ಎ+ಇ) ಆದರೆ ಕೂಡಿಸಿದಾಗ ಯಾವ ಸ್ವರವೂ ಲೋಪವಾಗಿಲ್ಲ ಅಥವಾ ಬಿಟ್ಟುಹೋಗಿಲ್ಲ. ಒಂದು ವೇಳೆ ಸ್ವರ ಲೋಪವಾದರೆ ಅರ್ಥ ಕೆಟ್ಟು ಹೋಗುತ್ತದೆ. ಆದುದರಿಂದ ಆ ಎರಡೂ ಸ್ವರಗಳ ನಡುವೆ 'ಯ್' ಅಥವಾ 'ವ್'– ವ್ಯಂಜನ ಹೆಚ್ಚಾಗಿ ಸೇರಿಕೊಂಡಿದೆ ಅಂದರೆ ಆಗಮವಾಗಿದೆ. ಹೀಗೆ ಸ್ವರಕ್ಕೆ ಸ್ವರ ಪರವಾದಾಗ ಲೋಪವಾಗಿ ಅರ್ಥ ಕೆಡುವುದಿದ್ದರೆ ಆ ಸ್ವರಗಳ ಮಧ್ಯೆ 'ಯ'ಕಾರ ಅಥವಾ 'ವ'ಕಾರವು ಹೊಸದಾಗಿ ಸೇರಿ ಆಗಮ ಸಂಧಿಯಾಗುವುದು. 'ಯ'ಕಾರ ಸೇರಿದರೆ ಯಕಾರಾಗಮ ಸಂಧಿಯೂ, 'ವ'ಕಾರ ಸೇರಿದರೆ ವಕಾರಾಗಮ ಸಂಧಿ ಎಂದೂ ಕರೆಯುತ್ತಾರೆ.

**ತತ್ಸಮ–ತತ್ಭವ;**

**ಈ ಕೆಳಗಿನ ವಾಕ್ಯಗಳನ್ನು ನೋಡಿ, ಕೆಳಗೆ ಗೆರೆ ಎಳೆದ ಪದಗಳ ವಿಶೇಷತೆ ಗಮನಿಸಿರಿ.**

೧. ಆಕಾಶದಲ್ಲಿ ಬಣ್ಣಬಣ್ಣದ ಗಾಳಿಪಟಗಳು ಹಾರಾಡುತ್ತಿದ್ದವು.
ಆಗಸದಲ್ಲಿ ಬಣ್ಣಬಣ್ಣದ ಗಾಳಿಪಟಗಳು ಹಾರಾಡುತ್ತಿದ್ದವು.

೨. ಗೀತಾಳ ಧ್ವನಿ ತುಂಬಾ ಇಂಪಾಗಿದೆ.
ಗೀತಾಳ ದನಿ ತುಂಬಾ ಇಂಪಾಗಿದೆ.

ಮೊದಲನೆಯ ಉದಾಹರಣೆಯಲ್ಲಿ 'ಆಕಾಶ' ಎಂದು ಒಮ್ಮೆ, 'ಆಗಸ' ಎಂದು ಮತ್ತೊಮ್ಮೆ ಬಳಸಲಾಗಿದೆ. ಹಾಗೆಯೇ ಎರಡನೆಯ ಉದಾಹರಣೆಯಲ್ಲಿ 'ಧ್ವನಿ' ಎಂದು ಒಮ್ಮೆ, 'ದನಿ' ಎಂದು ಮತ್ತೊಮ್ಮೆ ಉಪಯೋಗಿಸಲಾಗಿದೆ. ಆಕಾಶ, ಧ್ವನಿ– ಎಂಬ ಪದಗಳು ಸಂಸ್ಕೃತ ಮೂಲದವು. ಸಂಸ್ಕೃತದಲ್ಲಿ ಇರುವಂತೆಯೇ ಕನ್ನಡದಲ್ಲಿ ಬಳಸಿದರೆ ಅದನ್ನು ತತ್ಸಮ ಎಂದರೆ ಮೂಲ ಭಾಷೆಗೆ ಸಮ ಎಂದು ಗುರುತಿಸುತ್ತೇವೆ. ಆದರೆ ಎಲ್ಲ ಸಂದರ್ಭದಲ್ಲಿಯೂ ಹಾಗೆ ಮಾಡಲಾಗುವುದಿಲ್ಲ. ಆಗ ಕನ್ನಡದ ಜಾಯಮಾನಕ್ಕೆ ಹೊಂದುವಂತೆ ಅದನ್ನು ಮಾರ್ಪಾಡು ಮಾಡಿಕೊಂಡು ಉಪಯೋಗಿಸುತ್ತೇವೆ. ಆ ಪದವನ್ನು 'ತದ್ಭವ'– ಎಂದರೆ ಮೂಲ ಶಬ್ದದಿಂದ ಹುಟ್ಟಿದ್ದು ಎನ್ನುತ್ತೇವೆ. ಈ ಮೇಲಿನ ಉದಾಹರಣೆಯಲ್ಲಿ ಆಕಾಶ ಮತ್ತು ಧ್ವನಿ ತತ್ಸಮಗಳಾದರೆ, ಆಗಸ ಮತ್ತು ದನಿ ತದ್ಭವಗಳಾಗಿವೆ.

**ಈ ಕೆಳಗಿನ ಪದಗಳಲ್ಲಿ ತತ್ಸಮ–ತದ್ಭವಗಳನ್ನು ಗುರುತಿಸಿ ಬರೆಯಿರಿ.**

೧. ಶ್ರೀಮಂತ ೨. ಹರುಷ ೩. ಸಿರಿ ೪. ಬ್ರಹ್ಮ



**ಕೋಪವನ್ನು ಸಹನೆಯಿಂದ ಗೆಲ್ಲಬೇಕು**

* * *

ಪದ್ಯಪಾಠ

# ೨. ನೀತಿ ಮಾತು

–ಕನಕದಾಸ

(**ಆಶಯ :** 'ಸಜ್ಜನರ ಸಂಗ ಹೆಜ್ಜೇನು ಸವಿದಂತೆ' ಎಂಬ ಮಾತನ್ನು ನಾವು ಕೇಳಿದ್ದೇವೆ. ಒಳ್ಳೆಯವರ ಸ್ನೇಹ ಮತ್ತು ಜ್ಞಾನಿಗಳ ಸಂಗ ಉತ್ತಮವಾದುದು. ವ್ಯಕ್ತಿ ಹೇಗೆ ಜೀವನ ನಡೆಸಬೇಕೆಂಬುದನ್ನು ಕನಕದಾಸರು ಇಲ್ಲಿ ಸರಳವಾಗಿ ಹೇಳಿದ್ದಾರೆ.)

**ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ**
**ಸುಜ್ಞಾನಿಗಳ ಕೂಡ ಜಗಳವೇ ಲೇಸು । ಪ ।**

**ಉಂಬುಡುವುದಕ್ಕಿಲ್ಲದ ಅರಸನೋಲಗಕಿಂತ**
**ತುಂಬಿದೂರೊಳಗೆ ತಿರಿದುಂಬುವುದೇ ಲೇಸು**
**ಹಂಬಲಿಸಿ ಹಾಳರಟೆ ಹೊಡೆಯುವುದಕ್ಕಿಂತ ಹರಿ**
**ಯೆಂಬ ದಾಸರ ಕೂಡೆ ಸಂಭಾಷಣೆಯೆ ಲೇಸು**

**ಒಡನೆ ಹಂಗಿಸುವನೋಗರವನುಂಬುವುದಕಿಂತ**
**ಕುಡಿನೀರು ಕುಡಿದುಕೊಂಡಿರುವುದೇ ಲೇಸು**
**ಬಿಡದೆ ಬಾಂಧವರೊಡನೆ ಕಡಿದಾಡುವುದಕಿಂತ**
**ಅಡವಿಯೊಳಜ್ಞಾತ ವಾಸವೇ ಲೇಸು**

**ಮಸೆಯಲಿಹ ಮತ್ಸರದ ನೆರೆಯೊಳಗಿರುವುದಕಿಂತ**
**ಹಸನಿಲ್ಲದ ಹಾಳುಗುಡಿಯೆ ಲೇಸು**
**ಬಿಸಜಾಕ್ಷ ಕಾಗಿನೆಲೆಯಾದಿ ಕೇಶವರಾಯ**
**ವಸುಮತಿಯೊಳು ನಿನ್ನ ದಾಸತ್ವವೇ ಲೇಸು**



## ಕವಿ ಪರಿಚಯ



ಬಂಕಾಪುರದ ಹತ್ತಿರದಲ್ಲಿರುವ ಬಾಡ ಗ್ರಾಮದಲ್ಲಿ ಕನಕದಾಸರು ಜನಿಸಿದರು. ಆರಂಭದಲ್ಲಿ ದಂಡನಾಯಕರಾಗಿದ್ದ ಅವರು, ಜೀವನದಲ್ಲಿ ವೈರಾಗ್ಯ ಬಂದು ಎಲ್ಲವನ್ನೂ ಬಿಟ್ಟು ವ್ಯಾಸರಾಯರ ಶಿಷ್ಯರಾದರು. ಇವರು ಪುರಂದರದಾಸರ ಸಮಕಾಲೀನರು. ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ರಾಮಧಾನ್ಯಚರಿತೆ, ನಳಚರಿತ್ರೆ, ಮೋಹನ ತರಂಗಿಣಿ, ಹರಿಭಕ್ತಿಸಾರ ಮೊದಲಾದ ಕಾವ್ಯಗಳನ್ನು ಬರೆದಿದ್ದಾರೆ. ಅವರ ಅಂಕಿತನಾಮ ಕಾಗಿನೆಲೆ ಆದಿಕೇಶವ.

## ಓದಿ – ತಿಳಿಯಿರಿ

**ಅಜ್ಞಾನಿ** – ಜ್ಞಾನವಿಲ್ಲದವ , ತಿಳುವಳಿಕೆ ಇಲ್ಲದವ , ದಡ್ಡ ; **ಅಧಿಕ** – ಹೆಚ್ಚು ; **ಸುಜ್ಞಾನಿ** – ಉತ್ತಮ ಜ್ಞಾನಿ, ತಿಳಿದವ ; **ಲೇಸು** – ಒಳ್ಳೆಯದು ; **ಉಂಬು** – ಊಟ ಮಾಡು ; **ಅರಸ** – ರಾಜ ; **ಓಲಗ** – ಸಭೆ; **ತಿರಿದು** – ಭಿಕ್ಷೆ ಬೇಡಿ ; **ಹಂಬಲಿಸಿ** – ಆಸೆಪಟ್ಟು ; **ಓಗರ** – ಅನ್ನ ; **ಕಡಿದಾಡು** – ಜಗಳವಾಡು ; **ಅಡವಿ** – ಅರಣ್ಯ , ಕಾಡು ; **ಮತ್ಸರ** – ಹೊಟ್ಟೆಕಿಚ್ಚು , ದ್ವೇಷ ; **ನೆರೆ** – ಪಕ್ಕದಲ್ಲಿರುವ ; **ಗುಡಿ** – ದೇವಸ್ಥಾನ; **ಹಸನಿಲ್ಲದ** – ಅನುಕೂಲವಿಲ್ಲದ ; **ವಸುಮತಿ** – ಭೂಮಿ ; **ಮಸೆ** – ದ್ವೇಷಸಾಧಿಸು.

## ಗಮನಿಸಿ ತಿಳಿಯಿರಿ

**ಹಾಳರಟೆ** – ಕೆಲಸಕ್ಕೆ ಬಾರದ ಮಾತುಗಳನ್ನು ಆಡುತ್ತಾ ಇರುವುದು.

**ಅಜ್ಞಾತವಾಸ** – ಬೇರೆಯವರಿಗೆ ಗೊತ್ತಾಗದಂತೆ ರಹಸ್ಯವಾಗಿ ಇರುವುದು.

**ಮಸೆಯುವುದು** – ದ್ವೇಷ ಸಾಧಿಸುವುದು.

**ಬಿಸಜಾಕ್ಷ**–ವಿಷ್ಣು (ಬಿಸಜ – ಕಮಲ, ಅಕ್ಷ– ಕಣ್ಣು, ಕಮಲದಂತೆ ಕಣ್ಣುಳ್ಳವನು ಯಾವನೋ ಅವನೇ)

**ದಾಸತ್ವ** – ಸೇವಕತನ



## ಅಭ್ಯಾಸ ಚಟುವಟಿಕೆ

**ಅ. ಈ ಕೆಳಗಿನ ಪ್ರತಿಯೊಂದು ಪ್ರಶ್ನೆಗೂ ಒಂದೊಂದು ವಾಕ್ಯದಲ್ಲಿ ಉತ್ತರ ಬರೆಯಿರಿ**

೧. ಯಾರೊಡನೆ ಮಾಡುವ ಸ್ನೇಹ ಒಳ್ಳೆಯದಲ್ಲ ?

೨. ಅರಸನೋಲಗಕ್ಕಿಂತ ಯಾವುದು ಉತ್ತಮ ?

೩. ಹಾಳು ಹರಟೆಗಿಂತ ಯಾವುದು ಮೇಲು ?

೪. ಮತ್ಸರದ ನೆರೆಗಿಂತ ಎಲ್ಲಿದ್ದರೆ ಒಳ್ಳೆಯದು ?

**ಆ. ಈ ಕೆಳಗಿನ ಪ್ರತಿಯೊಂದು ಪ್ರಶ್ನೆಗಳಿಗೂ ಐದು–ಆರು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

೧. ಹಂಗಿಸುವವರನ್ನು ಮತ್ತು ಕಡಿದಾಡುವ ಬಾಂಧವರನ್ನು ಕುರಿತು ದಾಸರ ಅಭಿಪ್ರಾಯವೇನು?

೨. ಬಿಸಜಾಕ್ಷನ ದಾಸತ್ವವನ್ನು ದಾಸರು ಬಯಸಲು ಕಾರಣವೇನು?

**ಇ. ಸಂದರ್ಭ ಸಹಿತ ವಿವರಿಸಿ**

೧. "ಹರಿಯೆಂಬ ದಾಸರ ಕೂಡೆ ಸಂಭಾಷಣೆಯೆ ಲೇಸು "

೨. "ಕುಡಿನೀರು ಕುಡಿದುಕೊಂಡಿರುವುದೇ ಲೇಸು "

ಈ. ಮೊದಲೆರಡು ಪದಗಳಿರುವ ಸಂಬಂಧವನ್ನು ಗಮನಿಸಿ, ಮೂರನೆಯ ಪದಕ್ಕೆ ಸೂಕ್ತಪದವನ್ನು ಬರೆಯಿರಿ.

೧. ಜ್ಞಾನ : ಅಜ್ಞಾನ :: ನ್ಯಾಯ : ______

೨. ಬಿಸಜಾಕ್ಷ : ವಿಷ್ಣು :: ಹಣೆಗಣ್ಣ : ______

೩. ಹಣ ಇರುವವ : ಹಣವಂತ :: ಬುದ್ಧಿ ಇರುವವ : ________

೪. ಗೆಳೆಯ : ಗೆಳೆತನ :: ಹಗೆ : ________

ಉ. ಈ ಕೆಳಗಿನ ಪದ್ಯಭಾಗದಲ್ಲಿ ಖಾಲಿ ಇರುವ ಸ್ಥಳಗಳನ್ನು ಸೂಕ್ತ ಪದಗಳಿಂದ ಭರ್ತಿ ಮಾಡಿ.

೧. ತುಂಬಿದೂರೊಳಗೆ ________ಲೇಸು.

೨. ದಾಸರ ಕೂಡೆ__________ಲೇಸು.

೩. _________ಕುಡಿದುಕೊಂಡಿರುವುದೇ ಲೇಸು.

೪. ವಸುಮತಿಯೊಳು ನಿನ್ನ__________ಲೇಸು.

## ವ್ಯಾಕರಣಾಭ್ಯಾಸ

**ವಿಭಕ್ತಿ ಪ್ರತ್ಯಯಗಳು**

೧. ನೀನು ಮನೆಯಿಂದ ಯಾವಾಗ ಹೊರಟೆ ?

೨. ನಾನು ನಿಮ್ಮ ಮನೆಗೆ ಬರುತ್ತೇನೆ.

೩. ಅರೆ ! ಅವರ ಮನೆಯ ಬಾಗಿಲಿಗೆ ಬೀಗ ಹಾಕಿದೆ.

೪. ರಜನಿಯ ಮನೆಯಲ್ಲಿ ಹಬ್ಬದ ಸಂಭ್ರಮ.

ಮೇಲಿನ ವಾಕ್ಯಗಳಲ್ಲಿ ಬಂದಿರುವ ಮನೆಯಿಂದ, ಮನೆಗೆ, ಮನೆಯ, ಮನೆಯಲ್ಲಿ ಎಂಬ ಪದಗಳಲ್ಲಿ 'ಮನೆ' ಎಂಬುದು ಎಲ್ಲದರಲ್ಲೂ ಇದೆ. 'ಮನೆ'– ಎಂಬುದಕ್ಕೆ ಸ್ವತಂತ್ರವಾದ ಅರ್ಥವಿದೆ. ಇದನ್ನು ಪ್ರಕೃತಿ ಎನ್ನುವರು. ಸ್ವತಂತ್ರವಾದ ಅರ್ಥವಿಲ್ಲದೆ ಪ್ರಕೃತಿಗಳ ಮುಂದೆ ಸೇರಿ ಬೇರೆ ಬೇರೆ ಅರ್ಥವನ್ನುಂಟು ಮಾಡುವ ಉ, ಅನ್ನು, ಇಂದ, ಗೆ, ಕ್ಕೆ, ದೆಸೆಯಿಂದ, ಅ, ಅಲ್ಲಿ, ಏ, ಇರಾ, ಈ, ಆ– ಇತ್ಯಾದಿಗಳಿಗೆ ವಿಭಕ್ತಿ ಪ್ರತ್ಯಯಗಳೆಂದು ಕರೆಯುತ್ತಾರೆ.

**'ದಾಸರು' ಪದಕ್ಕೆ ವಿಭಕ್ತಿ ಪ್ರತ್ಯಯಗಳನ್ನು ಸೇರಿಸಿದ ಕೆಳಗಿನ ಉದಾಹರಣೆ ಗಮನಿಸಿರಿ.**

| ವಿಭಕ್ತಿ | ಪ್ರತ್ಯಯ | ಉದಾಹರಣೆ |
|---|---|---|
| ಪ್ರಥಮ | ಉ | ದಾಸರು |

| | | |
|---|---|---|
| ದ್ವಿತೀಯ | ಅನ್ನು | ದಾಸರನ್ನು |
| ತೃತೀಯ | ಇಂದ | ದಾಸರಿಂದ |
| ಚತುರ್ಥಿ | ಗೆ , ಇಗೆ , ಕೆ . ಅಕ್ಕೆ | ದಾಸರಿಗೆ |
| ಪಂಚಮಿ | ಇಂದ ( ದೆಸೆಯಿಂದ ) | ದಾಸರ ದೆಸೆಯಿಂದ |
| ಷಷ್ಠಿ | ಅ | ದಾಸರ |
| ಸಪ್ತಮಿ | ಅಲ್ಲಿ | ದಾಸರಲ್ಲಿ |

**ಈ ಕೆಳಗಿನ ಪ್ರಕೃತಿಗಳಿಗೆ ವಿಭಕ್ತಿ ಪ್ರತ್ಯಯಗಳನ್ನು ಸೇರಿಸಿ ಬರೆಯಿರಿ.**

ಅಜ್ಞಾನಿ , ಅಡವಿ,

## ಪ್ರಾಯೋಗಿಕ ಚಟುವಟಿಕೆ



**ಅ.** ಕನಕದಾಸರ ಈ ಕೀರ್ತನೆಯನ್ನು ಕಂಠಪಾಠ ಮಾಡಿ.

**ಆ.** **'ದುಷ್ಟರ ಕಂಡರೆ ದೂರವಿರು'** – ಈ ಮಾತಿನ ಭಾವವನ್ನು ನಾಲ್ಕೈದು ವಾಕ್ಯಗಳಲ್ಲಿ ವಿಸ್ತರಿಸಿ ಬರೆಯಿರಿ.

ಇ. ಹಾಳು ಹರಟೆಯಿಂದ ಆಗುವ ತೊಂದರೆಗಳ ಬಗೆಗೆ ನಿಮ್ಮ ಅಭಿಪ್ರಾಯಗಳನ್ನು ತರಗತಿಯಲ್ಲಿ ಹಂಚಿಕೊಳ್ಳಿ.

**ಈ.** **ಸರ್ವಜ್ಞನ ಈ ವಚನವನ್ನು ಗಟ್ಟಿಯಾಗಿ ಹೇಳಿ.**

**ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ**
**ದುರ್ಜನರ ಸಂಗದೊಡನಾಟ । ಬಚ್ಚಲಿನ**
**ರೊಚ್ಚಿನಂತಿಹುದು । ಸರ್ವಜ್ಞ**

**ಸಗಣಿಯವನೊಡನೆ ಸರಸಕ್ಕಿಂತ ಗಂಧದವನೊಡನೆ ಗುದ್ದಾಟವೇ ಲೇಸು**

* * *

ಗದ್ಯಪಾಠ

# ೮. ನಾನು ಕನ್ನಡ ಕವಿಯಾದೆ

–ಕುವೆಂಪು

**ಆಶಯ :** ವ್ಯಕ್ತಿಯ ಜೀವನದಲ್ಲಿ ನಡೆಯುವ ಒಂದು ಘಟನೆ, ಆಗ ಸಾಮಾನ್ಯವೆಂದು ತೋರುವ ಘಟನೆ, ನಂತರ ಅತ್ಯಂತ ಪರಿಣಾಮವನ್ನು ಬೀರಬಹುದು. ಈ ಪರಿಣಾಮ ಕೇವಲ ಆ ವ್ಯಕ್ತಿಯ ಜೀವನದ ಮೇಲೆ ಮಾತ್ರವಲ್ಲ, ಇಡೀ ರಾಷ್ಟ್ರ ಜೀವನದ ಮೇಲೆ ಬೀರಬಹುದು.





೧೯೨೪ನೆ ಜುಲೈ ೨ನೇ ತಾರೀಖು ಬುಧವಾರದ ದಿನ ನನ್ನ ಜೀವನದಲ್ಲಿ – ವಿಶೇಷವಾಗಿ ಸಾಹಿತ್ಯ ಸಂಬಂಧವಾದ ಜೀವನದಲ್ಲಿ– ಒಂದು ಸ್ಮರಣೀಯವಾದ ದಿನ. ಮಹಾರಾಜ ಹೈಸ್ಕೂಲಿನ ಇತಿಹಾಸದ ಅಧ್ಯಾಪಕರಾಗಿದ್ದ ಎಂ. ಎಚ್. ಕೃಷ್ಣ ಅಯ್ಯಂಗಾರ‍್ಯರನ್ನು ಅವರ ಆಹ್ವಾನದ ಮೇರೆಗೆ ಹೋಗಿ ಕಂಡೆ. ಅನೇಕ ಪ್ರೋತ್ಸಾಹದ ಮಾತುಕತೆ ನಡೆದ ಮೇಲೆ, ಅವರು ವಿಶ್ವವಿದ್ಯಾನಿಲಯದಲ್ಲಿ ವಿಶೇಷ ಉಪನ್ಯಾಸಗಳನ್ನು ಕೊಡಲು ಬಂದಿದ್ದ ಐರಿಸ್ ಕವಿ ಜೇಮ್ಸ್ ಎಸ್. ಕಸಿನ್ಸ್ ಅವರ ವಿಚಾರ ತಿಳಿಸಿ, ಅವರನ್ನು ಕಂಡು ಅವರಿಗೆ ನನ್ನ ಕವನಗಳನ್ನು ತೋರುವಂತೆ ಹೇಳಿದರು.

ಶ್ರೀಯುತ ಕಸಿನ್ಸ್ ಅವರು ಇಳಿದುಕೊಂಡಿದ್ದ ಗೌರ‍್ನಮೆಂಟ್ ಗೆಸ್ಟ್ ಹೌಸ್‌ಗೆ ಹೋದೆವು. ನಾನೂ ನನ್ನೊಬ್ಬ ಸ್ನೇಹಿತರು. ಸ್ಥಳ ಏಕಾಂತವಾಗಿತ್ತು. ಉದ್ಯಾನ ಸೌಂದರ್ಯದ ಮಧ್ಯೆ ಗ್ರಾಮೀಣ ಮನಸ್ಸಿಗೆ ಗಾಬರಿ ಹುಟ್ಟಿಸುವ ಮಟ್ಟಿಗೆ ಭವ್ಯವಾಗಿತ್ತು ಆ ಕಟ್ಟಡ, ಅದರ ಶಿಸ್ತು. ಒಬ್ಬ ಅನುಚರ ನೌಕರ ಬಂದು ನಮ್ಮನ್ನು ಹೊರಗೆ ಇದ್ದ ಸೋಫಾದ ಮೇಲೆ ಕೂರಿಸಿ ನನ್ನ ಹೆಸರು ಬರೆದುಕೊಟ್ಟ ಚೀಟಿಯನ್ನು ತೆಗೆದುಕೊಂಡು ಒಳಗೆ ಹೋದನು. ಬಹಳ ಹೊತ್ತು ಅವನು ಹೊರಗೆ ಬರಲಿಲ್ಲ. ನಾವಿಬ್ಬರೂ ಸಣ್ಣ ದನಿಯಲ್ಲಿ ಮಾತಾಡಿಕೊಳ್ಳುತ್ತಾ ಕಾದೆವು.

ಬಹಳ ಹೊತ್ತಿನ ಮೇಲೆ ಅನುಚರ ಬಂದು ನನ್ನನ್ನು ಒಳಗೆ ಕರೆದೊಯ್ದು ಕಸಿನ್ಸ್ ಅವರು ಕುಳಿತಿದ್ದ ಸ್ಥಳ ನಿರ್ದೇಶನ ಮಾಡಿ ಹೊರಗೆ ಹೋದ. ನಾನು ಮುಂಬಂದು ಕಸಿನ್ಸ್ ಅವರ ಸಮೀಪದಲ್ಲಿಯೇ ಮತ್ತೊಂದು ಸೋಫಾದ ಮೇಲೆ ಕುಳಿತೆ. ನಮಸ್ಕಾರಾದಿಗಳ ಅನಂತರ, ನಾನು ಏತಕ್ಕೆ ಬಂದೆ, ಯಾರ

ಸಲಹೆಯ ಮೇರೆಗೆ, ಎಂಬುದನ್ನು ಹೇಳಿ ನನ್ನ ಕೈಲಿದ್ದ ಹಸ್ತಪ್ರತಿಯನ್ನು ಅವರಿಗೆ ಕೊಟ್ಟೆ. ಅವರು ಸ್ವಲ್ಪ ಹೊತ್ತು ಹಾಳೆಗಳನ್ನು ಮಗುಚಿ ಮಗುಚಿ ನೋಡಿದರು. ಮತ್ತೆ ತಲೆಯೆತ್ತಿ ನನ್ನನ್ನು ಆಪಾದಮಸ್ತಕ ನೋಡಿದರು. ನಾನು ಸ್ವದೇಶೀ ಚಳುವಳಿಯಲ್ಲಿ ಅಂಗಿ ಟೋಪಿಗಳನ್ನು ಬೆಂಕಿಗೆ ಎಸೆದಂದಿನಿಂದ ಖಾದಿ ಬಟ್ಟೆಯನ್ನೇ ಉಪಯೋಗಿಸುತ್ತಿದ್ದೆ; ಖಾದಿ ಟೋಪಿ, ಖಾದಿಷರಟು, ಖಾದಿ ಪಂಚೆ.

ಕಸಿನ್ಸ್ ಸ್ವಲ್ಪ ಅಸಮಾಧಾನದ ಧ್ವನಿಯಿಂದಲೇ ಮಾತಾಡಿದರು. "ಏನಿದೆಲ್ಲ ಕಗ್ಗ? ನಿಮ್ಮ ಮೈಮೇಲೆ ನೋಡಿದರೆ ತಲೆಯಿಂದ ಕಾಲಿನವರೆಗೂ ಸ್ವದೇಶೀ ವಸ್ತ್ರಗಳೇ ಕಾಣುತ್ತವೆ. ಇದು ಮಾತ್ರ ಸ್ವದೇಶಿಯಲ್ಲ. ನಿಮ್ಮ ಭಾಷೆಯಲ್ಲಿ ಏನಾದರೂ ಬರೆದಿದ್ದೀರಾ?"

ಅವರ ಧ್ವನಿಗೂ, ಭಂಗಿಗೂ ನನಗಾಗಲೇ ಮುನಿಸು ಬರತೊಡಗಿತ್ತು. ನನ್ನ ಇಂಗ್ಲಿಷ್ ಕವನಗಳನ್ನು ನೋಡಿ ಇತರ ನನ್ನ ಭಾರತೀಯ ಮಿತ್ರರು, ಅಧ್ಯಾಪಕರೂ ಶ್ಲಾಘಿಸಿದ್ದಂತೆ ಅವರೂ ಅವುಗಳನ್ನು ಮೆಚ್ಚಿ ಹೊಗಳುತ್ತಾರೆ ಎಂದು ಆಸೆಪಟ್ಟಿದ್ದ ನನಗೆ ತುಂಬಾ ತೇಜೋವಧೆಯಾದಂತಾಗಿ, ನಿರಾಶೆಯಾಯಿತು. ನಾನು ಕನ್ನಡದಲ್ಲಿ ಆಗಲೆ 'ಅಮಲನ ಕಥೆ'ಯನ್ನೂ ಮತ್ತೂ ಇತರ ಒಂದೆರಡು ಕವನ ಬರೆಯುವ ಪ್ರಯತ್ನವನ್ನೂ ಮಾಡಿದ್ದೆನಾದರೂ ಅವರ ಪ್ರಶ್ನೆಗೆ ಮಲೆತವನಂತೆ ಉತ್ತರಿಸಿದೆ– "ಇಲ್ಲ, ಕನ್ನಡದಲ್ಲಿ ಇಂಗ್ಲಿಷಿನಲ್ಲಿ ಸಾಧ್ಯವಾಗುವಂತೆ, ಉದಾತ್ತ ಭಾವಗಳನ್ನು, ಉನ್ನತ ಆಲೋಚನೆಗಳನ್ನು ಹೇಳಲು ಸಾಧ್ಯವಾಗುವುದಿಲ್ಲ. ಆ ಭಾಷೆಯ ಮಟ್ಟ ಬಹಳ ಕೀಳು. ಅಲ್ಲದೆ ಅದರಲ್ಲಿರುವ ಛಂದಸ್ಸೂ ಹಳೆಯ ಕಂದಾಚಾರದ ಛಂದಸ್ಸು, ವೃತ್ತ, ಕಂದ ಇತ್ಯಾದಿ. ಇಂಗ್ಲಿಷಿನಲ್ಲಿರುವ ಛಂದೋವೈವಿಧ್ಯ ಇಲ್ಲವೇ ಇಲ್ಲ." ಈಗ ನನಗೆ ಅತ್ಯಂತ ಅವಿವೇಕವಾಗಿಯೂ, ಹಾಸ್ಯಾಸ್ಪದವಾಗಿಯೂ, ಧೂರ್ತವಾಗಿಯೂ ತೋರುವ ನನ್ನ ಆ ಉತ್ತರವನ್ನು ಆಲಿಸಿ ಪರಿಣತ ಮನಸ್ಸಿನವರೂ, ಅನುಭವಶಾಲಿಗಳೂ ಆಗಿದ್ದ ಅವರು ಸೌಮ್ಯ– ಸಾಂತ್ವನಕರ ಧ್ವನಿಯಿಂದ ಹೇಳಿದರು.– "ಹಾಗಲ್ಲ, ಯಾವಭಾಷೆಯೂ ತನಗೆ ತಾನೇ ಅಸಮರ್ಥವಲ್ಲ. ಸಮರ್ಥನೊಬ್ಬನು ಬರುವ ತನಕ ಮಾತ್ರ ಅದು ಅಸಮರ್ಥವೆಂಬಂತೆ ತೋರಬಹುದು. ಸಮರ್ಥನು ಬಂದೊಡನೆ ಅವನ ಕೈಯಲ್ಲಿ ಅದು ಎಂತಹ ಅದ್ಭುತವನ್ನಾದರೂ ಸಾಧಿಸಬಲ್ಲುದು. ಈಗ ನೋಡಿ, ಬಂಗಾಳಿ ಭಾಷೆ– ನೀವು ನಿಮ್ಮ ಭಾಷೆಯನ್ನು ಕುರಿತು ಹೇಳಿದಂತೆಯೇ ಅದೂ ಇತ್ತು. ರವೀಂದ್ರನಾಥ ಠಾಕೂರರು ಬಂದರು. ಹೊಸ ಹೊಸ ರೀತಿಯಲ್ಲಿ ಬರೆದರು. ಹೊಸ ಛಂದಸ್ಸುಗಳನ್ನು ಕಂಡುಹಿಡಿದರು. ಅವರಿಗೆ ನೋಬಲ್ ಬಹುಮಾನವೂ ಬಂದಿತು! ಹಾಗೆಯೆ ನೀವು ಹೊಸ ಹೊಸ ಛಂದಸ್ಸುಗಳನ್ನು ಕಂಡುಹಿಡಿದು ಹೊಸ ಹೊಸ ಪದಗಳನ್ನು, ಪದಪ್ರಯೋಗಗಳನ್ನು ಸಾಧಿಸಿ, ಹೊಸ ರೀತಿಯ ಸಾಹಿತ್ಯ ಸೃಷ್ಟಿ ಮಾಡಬೇಕು. ನೀವು ಸೃಷ್ಟಿಸುವ ಸಾಹಿತ್ಯ ಶ್ರೇಷ್ಠವೆಂದು ತೋರಿಬಂದರೆ ನಾವು ಅದನ್ನು ಇಂಗ್ಲಿಷಿಗೆ ಭಾಷಾಂತರಿಸಿಕೊಳ್ಳುತ್ತೇವೆ. ರವೀಂದ್ರರ ಸಾಹಿತ್ಯ ಇಂಗ್ಲಿಷಿಗೆ ಭಾಷಾಂತರವಾಗಿರುವಂತೆ. ನೀವು ಇಂಗ್ಲಿಷಿನಲ್ಲಿ ಸೃಜನ ಸಾಹಿತ್ಯ ಸೃಷ್ಟಿ ಮಾಡಲಾರಿರಿ. ಅದು ನಿಮಗೆ ಪರಭಾಷೆ ಹುಟ್ಟಿನೊಡನೆ ಬಂದ ಭಾಷೆಯಲ್ಲಿ ಮಾತ್ರ ಉತ್ತಮ ಸೃಜನಶೀಲ ಸಾಹಿತ್ಯ ಸೃಷ್ಟಿಯಾಗಬಲ್ಲುದು. ಅದರಲ್ಲಿಯೂ ಕವಿತೆಯಲ್ಲಂತೂ, ಉತ್ತಮ ಸೃಜನ ಸಾಹಿತ್ಯ ಯಾರಿಗೂ ಪರಭಾಷೆಯಲ್ಲಿ ಸಾಧ್ಯವಲ್ಲ. ಅದು ನಿಮಗೆ ಗೊತ್ತಾಗುವುದೂ ಇಲ್ಲ ಅದನ್ನು ಓದುವ ನಮಗೆ ಗೊತ್ತಾಗುತ್ತದೆ. ಅದೆಂತಹ ನಗೆಪಾಟಲ ಸೃಷ್ಟಿ ಎಂಬುದು."

ಇನ್ನೂ ಕೆಲವು ವಿವೇಕದ ಮಾತುಗಳನ್ನಾಡಿ ಹಸ್ತಪ್ರತಿಯನ್ನು ನನಗೆ ವಾಪಸ್ಸು ಕೊಟ್ಟು ಬೀಳ್ಕೊಂಡರು. ನಾನು ಖಿನ್ನನಾಗಿ ಅತೃಪ್ತ ಮತ್ತು ಕುಪಿತಚಿತ್ತ ಭಂಗಿಯಲ್ಲಿ ಹೊರಗೆ ಬಂದೆ.

ಹೊರಗಡೆ ಕುಳಿತಿದ್ದ ಮಿತ್ರರಿಗೆ , ನನಗಾದ ತೇಜೋವಧೆಯೆಂದು ನಾನು ತಿಳಿದುಕೊಂಡಿದ್ದ ಸಂಗತಿಯನ್ನು ಹೊರಗೆಡಹದೆ ಮುಚ್ಚಿಕೊಂಡೆ. ಕಸಿನ್ಸ್ ಅವರು ಸ್ವದೇಶಿ ಚಳುವಳಿಗಾರರಾಗಿರುವುದರಿಂದ ನನ್ನ ಸ್ವದೇಶಿ ಭಾಷೆಯಾದ ಕನ್ನಡದಲ್ಲಿಯೇ ನಾನು ಬರೆದರೆ ಉತ್ತಮ ಮತ್ತು ದೇಶಭಕ್ತಿದ್ಯೋತಕ ಎಂದು ಬೋಧಿಸಿದರೆಂದು ವ್ಯಂಗ್ಯವಾಗಿ ಟೀಕಿಸಿದೆ.

ಆದರೆ ಕಸಿನ್ಸ್ ಅವರ ಹಿತವಚನ ಮೇಲೆ ಮೇಲಕ್ಕೆ ತಿರಸ್ಕೃತವಾದರೂ ಸುದೈವದಿಂದ ನನ್ನ ಅಂತಃಪ್ರಜ್ಞೆ ಅದನ್ನು ಒಪ್ಪಿಕೊಂಡಿತ್ತೆಂದು ತೋರುತ್ತದೆ. ಕನ್ನಡದ ವಾಗ್ದೇವಿಯ ಕೃಪೆಯೂ ಆ ಸುಸಂಧಿಯನ್ನು ಉಪಯೋಗಿಸಿಕೊಂಡು ತನ್ನ ಕಂದನನ್ನು ತನ್ನ ಹಾಲೆದೆಗೆ ಎಳೆದುಕೊಂಡಳು!

ಹಿಂತಿರುಗಿ ಬರುವಾಗಲೆ ದಾರಿಯಲ್ಲಿ ಏನೋ ಒಂದು ಕನ್ನಡ ಕವಿತೆಯನ್ನು ರಚಿಸುತ್ತಾ ಗುನುಗುತ್ತಾ ಬಂದೆ. ನನ್ನ ಸಹವಾಸಿ ಮಿತ್ರರೊಬ್ಬರು ಅದನ್ನು ರಾಗವಾಗಿ ಹಾಡಿದಾಗ ನನಗೆ ಉಂಟಾದ ಹಿಗ್ಗನ್ನು ಏನೆಂದು ಹೇಳಲಿ? ಅವರ ರಾಗದ ಮಾಧುರ್ಯವನ್ನು ನನ್ನ ಕವಿತಾಸಾಮರ್ಥ್ಯಕ್ಕೆ ಅಧ್ಯಾರೋಪ ಮಾಡಿ ನನ್ನ ಬೆನ್ನನ್ನು ನಾನೇ ತಟ್ಟಿಕೊಂಡೆ. ಅಂದಿನಿಂದ ಕನ್ನಡದಲ್ಲಿ ರಚಿಸುವ ಮನಸ್ಸು ಮಾಡಿದೆ. ಆದರೆ ಇಂಗ್ಲಿಷ್ ಕವನ ರಚನೆಯನ್ನು ಬಿಡಲಿಲ್ಲ. ಎರಡೂ ಭಾಷೆಯಲ್ಲಿ ಸವ್ಯಸಾಚಿಯಾಗುತ್ತೇನೆಂದು ಭಾವಿಸಿದೆ. ಆದರೆ ಕ್ರಮೇಣ ೧೯೨೭–೨೮ರ ಹೊತ್ತಿಗೆ ಇಂಗ್ಲಿಷ್ ರಚನೆ ಸಂಪೂರ್ಣವಾಗಿ ನಿಂತುದನ್ನು ನನ್ನ ದಿನಚರಿ ಹೇಳುತ್ತದೆ. ಅಂದರೆ ಮೊದಲನೆ ವರ್ಷದ ಬಿ.ಎ, ತರಗತಿಯಲ್ಲಿ ಸ್ವಲ್ಪ ಸ್ವಲ್ಪವಾಗಿಯೂ, ಎರಡನೆಯ ವರ್ಷದ ಬಿ.ಎ,ತರಗತಿಯಲ್ಲಿ ಅತ್ಯಲ್ಪವಾಗಿಯೂ ನನ್ನ ಇಂಗ್ಲಿಷ್ ಕವನ ರಚನೆ ಮುಂದುವರಿದಿದೆ. ಕನ್ನಡದ ರುಚಿ ಮತ್ತು ಅಭಿರುಚಿ ಹೆಚ್ಚಾದಂತೆಲ್ಲಾ ಇಂಗ್ಲಿಷ್ ತಿರೋಹಿತವಾಗಿದೆ.

## ಲೇಖಕರ ಪರಿಚಯ



ಕುವೆಂಪು ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕಿನ ಕುಪ್ಪಳ್ಳಿಯವರು. ಮೈಸೂರು ಮಹಾರಾಜ ಕಾಲೇಜಿನಲ್ಲಿ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಪ್ರಿನ್ಸಿಪಾಲರಾಗಿ ಮೈಸೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿ ಸೇವೆ ಸಲ್ಲಿಸಿದ್ದಾರೆ.

ಮಕ್ಕಳ ಕವನವಾದ 'ಬೊಮ್ಮನಹಳ್ಳಿಯ ಕಿಂದರಿ ಜೋಗಿ' ಯಿಂದ ಹಿಡಿದು 'ಶ್ರೀರಾಮಾಯಣ ದರ್ಶನಂ' ಮಹಾಕಾವ್ಯದವರೆಗೆ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿ ವೈವಿಧ್ಯಮಯ ಕೃತಿಗಳನ್ನು ರಚಿಸಿದ್ದಾರೆ.

ಇವರ ಮೇರು ಕೃತಿ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಹಾಗೂ ಜ್ಞಾನಪೀಠ ಪ್ರಶಸ್ತಿ ಲಭಿಸಿತು. ಅಲ್ಲದೆ ಅವರಿಗೆ ರಾಷ್ಟ್ರಕವಿ, ಪಂಪ ಪ್ರಶಸ್ತಿ, ಪದ್ಮಭೂಷಣ ಪ್ರಶಸ್ತಿ, ಕರ್ನಾಟಕ ರತ್ನ ಪ್ರಶಸ್ತಿ, ಮೈಸೂರು, ಬೆಂಗಳೂರು, ಕರ್ನಾಟಕ, ಗುಲ್ಬರ್ಗ ವಿಶ್ವವಿದ್ಯಾನಿಲಯಗಳು ಗೌರವ ಡಾಕ್ಟರೇಟ್ ಪ್ರಶಸ್ತಿ ನೀಡಿ ಗೌರವಿಸಿವೆ. ಪ್ರಸ್ತುತ ಈ ಗದ್ಯಭಾಗವನ್ನು ಕುವೆಂಪುರವರ 'ನೆನಪಿನ ದೋಣಿಯಲ್ಲಿ' ಎಂಬ ಆತ್ಮಕಥೆಯಿಂದ ಆರಿಸಿಕೊಳ್ಳಲಾಗಿದೆ.

## ಓದಿ ತಿಳಿಯಿರಿ

ಅನುಚರ– ಹಿಂಬಾಲಕ; ಆಪಾದಮಸ್ತಕ– ಕಾಲಿನಿಂದ ತಲೆಯವರೆಗೆ; ಕಗ್ಗ–ಕೆಲಸಕ್ಕೆ ಬಾರದ; ಶ್ಲಾಘಿಸು–ಹೊಗಳು; ತೇಜೋವಧೆ–ಅವಮಾನ; ನಿರಾಶೆ–ಆಶಾಭಂಗ; ಉದಾತ್ತ–ಶ್ರೇಷ್ಠವಾದ; ಕಂದಾಚಾರ–ಗೊಡ್ಡು ಸಂಪ್ರದಾಯ; ಧೂರ್ತ–ಮೋಸಗಾರ; ಸೃಜನ–ಸೃಷ್ಟಿ; ಖಿನ್ನ–ಬಳಲಿದ; ಕುಪಿತ–ಕೋಪಗೊಂಡ; ದ್ಯೋತಕ–ಗುರುತು; ಸುದೈವ–ಅದೃಷ್ಟ; ಸುಸಂಧಿ–ಒಳ್ಳೆಯ ಅವಕಾಶ; ಗುನುಗು–ಸಣ್ಣ ಧ್ವನಿ; ಅಧ್ಯಾರೋಪ–ಊಹಿಸಿ ತಿಳಿದುಕೊಳ್ಳುವುದು; ಸವ್ಯಸಾಚಿ–ಎರಡು ಕೆಲಸವನ್ನು ಒಟ್ಟಿಗೆ ಮಾಡಬಲ್ಲವನು, ನಿಪುಣ; ತಿರೋಹಿತ–ಮರೆಯಾಗು.

## ಗಮನಿಸಿ ತಿಳಿಯಿರಿ

ಜೇಮ್ಸ್ ಎಚ್ ಕಸಿನ್ಸ್ – ಐರ್ಲೆಂಡ್ ದೇಶದ ಕವಿ

ಸ್ವದೇಶಿ ಚಳವಳಿ – ಸ್ವಾತಂತ್ರ್ಯ ಹೋರಾಟ ಸಂದರ್ಭದಲ್ಲಿ ಗಾಂಧೀಜಿಯವರು ಪ್ರಾರಂಭಿಸಿದ ಚಳವಳಿ.

ರವೀಂದ್ರನಾಥ ಠಾಕೂರರು – ನೋಬಲ್ ಪ್ರಶಸ್ತಿ ವಿಜೇತ ಬಂಗಾಳಿ ಲೇಖಕರು

ನೊಬೆಲ್ ಬಹುಮಾನ – ಜಾಗತಿಕ ಮಟ್ಟದ ಒಂದು ಪ್ರಶಸ್ತಿ

ಸ್ಥಳ ನಿರ್ದೇಶನ – ಜಾಗ ತೋರಿಸುವುದು.



## ಅಭ್ಯಾಸ ಚಟುವಟಿಕೆ

**ಅ. ಕೆಳಗಿನ ಪ್ರತಿಯೊಂದು ಪ್ರಶ್ನೆಗೂ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಕುವೆಂಪುರವರಿಗೆ ತಮ್ಮ ಕವನಗಳನ್ನು ಕಸಿನ್ಸ್‌ರವರಿಗೆ ತೋರಿಸುವಂತೆ ಯಾರು ತಿಳಿಸಿದರು?

೨. ಜೇಮ್ಸ್ ಕಸಿನ್ಸ್ ಮೈಸೂರಿಗೆ ಏಕೆ ಬಂದಿದ್ದರು?

೩. ಕಸಿನ್ಸ್‌ರವರನ್ನು ಭೇಟಿ ಮಾಡಲು ಹೋದಾಗ ಕುವೆಂಪುರವರ ವೇಷಭೂಷಣ ಹೇಗಿತ್ತು?

೪. ಕಸಿನ್ಸ್‌ರವರಿಂದ ಹಸ್ತಪ್ರತಿಗಳನ್ನು ಹಿಂಪಡೆದ ಕುವೆಂಪು ಯಾವ ಮನಸ್ಸಿನಿಂದ ಹೊರಬಂದರು?

೫. ಕುವೆಂಪು ಅವರ ಕೃತಿಗಳನ್ನು ಹೆಸರಿಸಿರಿ.

**ಆ. ಪ್ರತಿಯೊಂದು ಪ್ರಶ್ನೆಗೂ ೩–೪ ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಕುವೆಂಪುರವರ ಹಸ್ತಪ್ರತಿಗಳನ್ನು ನೋಡಿದ ಕಸಿನ್ಸ್ ಹೇಳಿದ ಮಾತುಗಳಾವುವು?

೨. ಕುವೆಂಪುರವರಿಗೆ ಕನ್ನಡದಲ್ಲಿ ಬರೆಯಲು ಕಾರಣವಾದ ಸಂದರ್ಭವನ್ನು ತಿಳಿಸಿ.

ಇ. **ಸಂದರ್ಭ ಸಹಿತ ವಿವರಿಸಿರಿ.**

೧. ‘ನಿಮ್ಮ ಭಾಷೆಯಲ್ಲಿ ಏನಾದರೂ ಬರೆದಿದ್ದೀರಾ?’

೨. ‘ನೀವು ಇಂಗ್ಲೀಷಿನಲ್ಲಿ ಸೃಜನ ಸಾಹಿತ್ಯ ಸೃಷ್ಟಿ ಮಾಡಲಾರಿರಿ.’

೩. ‘ಅಂದಿನಿಂದ ಕನ್ನಡದಲ್ಲಿ ರಚಿಸುವ ಮನಸ್ಸು ಮಾಡಿದೆ.’

## ಭಾಷಾಭ್ಯಾಸ

ಅ. **ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.**

ಸಮಾಧಾನ, ಸಾಧ್ಯ, ಹಳೆಯ, ವಿವೇಕ, ಅಸಮರ್ಥ, ಹಿಗ್ಗು, ತಿರಸ್ಕಾರ

ಆ. **ಕೆಳಗಿನ ಪದಗಳಿಗೆ ಸಮಾನಾರ್ಥಕ ಪದಗಳನ್ನು ಬರೆಯಿರಿ.**

ಮಿತ್ರ , ಸಮಯ , ಸಮೀಪ

ಇ. **ಕೆಳಗಿನ ಪದಗಳನ್ನು ಬಳಸಿಕೊಂಡು ಸ್ವಂತ ವಾಕ್ಯ ಮಾಡಿರಿ.**

ಚಳವಳಿ, ಸ್ವದೇಶಿ, ನಿರಾಶೆ, ಗುನುಗು

ಈ. **ಬಿಡಿಸಿ ಬರೆದು ಸಂಧಿ ಹೆಸರಿಸಿ.**

ಸಲಹೆಯಿತ್ತರು, ತಲೆಯೆತ್ತು, ಭವ್ಯವಾಗಿತ್ತು, ಚೀಟಿಯನ್ನು, ತಲೆಯಿಂದ, ಕೈಯಲ್ಲಿ

ಉ. **ಮೊದಲೆರಡು ಪದಗಳಂತೆ ಮೂರನೆಯ ಪದಕ್ಕೆ ಸಂಬಂಧಿಸಿದ ಪದ ಬರೆಯಿರಿ.**

೧. ಕುವೆಂಪು : ಕನ್ನಡದ ಕವಿ :: ಜೇಮ್ಸ್ ಕಸಿನ್ಸ್ : ____________

೨. ತೃಪ್ತಿ : ಅತೃಪ್ತಿ :: ಸಮಾಧಾನ : ____________

೩. ಕಾಲಕ್ಕೆ : ಚತುರ್ಥಿ ವಿಭಕ್ತಿ :: ಪ್ರಯತ್ನವನ್ನು : ____________

೪. ಸಂತೆ : ಸಂಸ್ಥೆ :: ಜಾತ್ರೆ : ____________

೫. ಊರನ್ನು : ಲೋಪಸಂಧಿ :: ಮಳೆಗಾಲ : ____________

## ವ್ಯಾಕರಣಾಭ್ಯಾಸ

ಅ. **ಆದೇಶ ಸಂಧಿ:**

**ಈ ಕೆಳಗಿನ ಉದಾಹರಣೆಗಳನ್ನು ಗಮನಿಸಿರಿ.**

ತಲೆ + ಕೂದಲು = ತಲೆಗೂದಲು (ಕ ಕಾರಕ್ಕೆ ಗಕಾರಾದೇಶ)

ಕೆಳ + ತುಟಿ = ಕೆಳದುಟಿ ( ತ ಕಾರಕ್ಕೆ ದಕಾರಾದೇಶ)

ಕಣ್ + ಪನಿ = ಕಂಬನಿ (ಪ ಕಾರಕ್ಕೆ ಬಕಾರಾದೇಶ)

ಸಂಧಿಯಾಗುವಾಗ ಒಂದು ಅಕ್ಷರದ ಸ್ಥಾನದಲ್ಲಿ ಬೇರೊಂದು ಅಕ್ಷರವು ಬರುವುದೇ ಆದೇಶಸಂಧಿ. ಇದನ್ನು ಕನ್ನಡದ ವ್ಯಂಜನ ಸಂಧಿ ಎಂದು ಕರೆಯುವರು.

ಉತ್ತರ ಪದದ ಮೊದಲ ವ್ಯಂಜನಾಕ್ಷರಗಳಾದ ಕ, ತ, ಪ ಗಳಿಗೆ ಅನುಕ್ರಮವಾಗಿ ಗ, ದ, ಬ ವ್ಯಂಜನಾಕ್ಷರಗಳು ಆದೇಶವಾಗಿ ಬರುತ್ತವೆ.

**ಈ ಕೆಳಗಿನ ಪದಗಳನ್ನು ಕೂಡಿಸಿ ಬರೆಯಿರಿ.**

ಹುಲಿ + ತೊಗಲು , ಮಳೆ + ಕಾಲ

**ಆ. ರಜೆ ಅರ್ಜಿ**

**ನಿಮ್ಮ ಅನಾರೋಗ್ಯದ ಕಾರಣ ನೀಡಿ ಎರಡು ದಿನಗಳ ರಜೆ ಕೋರಿ ನಿಮ್ಮ ಮುಖ್ಯ ಶಿಕ್ಷಕರಿಗೆ ರಜೆ ಅರ್ಜಿ ಬರೆಯಿರಿ.**

## ಪ್ರಾಯೋಗಿಕ ಚಟುವಟಿಕೆ

೧. ಕುವೆಂಪುರವರ 'ನೆನಪಿನ ದೋಣಿ' ಆತ್ಮಕಥೆಯನ್ನು ಓದಿರಿ.

೨. ಪ್ರಸಿದ್ಧ ವ್ಯಕ್ತಿಗಳ ಆತ್ಮಕಥೆಗಳ ಹೆಸರುಗಳನ್ನು ಸಂಗ್ರಹಿಸಿರಿ.

೩. ಪ್ರತಿದಿನ ನಿಮ್ಮ ಕಾರ್ಯಚಟುವಟಿಕೆಗಳ ದಿನಚರಿ ಬರೆಯುವುದನ್ನು ಅಭ್ಯಾಸ ಮಾಡಿ.



**ಎಲ್ಲಾದರು ಇರು ಎಂತಾದರು ಇರು ಎಂದೆಂದಿಗು ನೀ ಕನ್ನಡವಾಗಿರು**

* * *

ಪದ್ಯಪಾಠ

# ೬. ಒಂದು ರಾತ್ರಿ

– ಎಸ್.ವಿ. ಪರಮೇಶ್ವರಭಟ್ಟ

**ಆಶಯ :** ಕನ್ನಡ ಸಾಹಿತ್ಯದಲ್ಲಿ ಭಾವಗೀತೆ ಒಂದು ಆಧುನಿಕ ಪ್ರಕಾರವಾಗಿದೆ. ಕವಿ ಕಲ್ಪನಾ ಲೋಕದಲ್ಲಿ ವಿಹರಿಸಿದಾಗ ವರ್ಣನೆ ಸಾಕಾರಗೊಳ್ಳುತ್ತದೆ. 'ಒಂದು ರಾತ್ರಿ' ಪದ್ಯದಲ್ಲಿ ಪ್ರಕೃತಿಯ ಸುಂದರ ದೃಶ್ಯವನ್ನು ಕವಿ ವರ್ಣಿಸಿರುವ ರೀತಿ ಮಹತ್ವದ್ದಾಗಿದೆ. ಮೋಡವನ್ನೇ ತೊಟ್ಟಿಲಾಗಿ ಕಲ್ಪಿಸಿಕೊಂಡ ಕವಿ ಅದಕ್ಕೆ ಪೂರಕವಾಗಿ ಇರುಳಿನ ನಿಸರ್ಗದ ಸಾಮರಸ್ಯವನ್ನು ಬೆಸೆದಿದ್ದಾರೆ. ಗಾಳಿಯೇ ಜೋಗುಳ ಹಾಡುತ್ತಾ ಹೊಸ ಹುಟ್ಟಿಗಾಗಿ ಹಂಬಲಿಸುವುದನ್ನು ತಮ್ಮದೇ ಶೈಲಿಯಲ್ಲಿ ಪ್ರಸ್ತುತಪಡಿಸಿದ್ದಾರೆ. ಈ ಕವನದಲ್ಲಿ ರಾತ್ರಿಯ ಕಲ್ಪನೆ ಸುಂದರವಾಗಿ ಮೂಡಿ ಬಂದಿದೆ.





ತಿಳಿಮುಗಿಲ ತೊಟ್ಟಿಲಲಿ
ಮಲಗಿದ್ದ ಚಂದಿರನ
ಗಾಳಿ ಜೋಗುಳ ಹಾಡಿ
ತೂಗುತ್ತಿತ್ತು

ಗರಿಮುದುರಿ ಮಲಗಿದ್ದ
ಹಕ್ಕಿಗೂಡುಗಳಲ್ಲಿ
ಇರುಳು ಹೊಂಗನಸೂಡಿ
ಸಾಗುತ್ತಿತ್ತು

ಮುಗುಳಿರುವ ಹೊದರಿನಲಿ
ನರುಗಂಪಿನುದರದಲಿ
ಜೇನುಗನಸಿನ ಹಾಡು
ಕೇಳುತ್ತಿತ್ತು

ತುಂಬುನೀರಿನ ಹೊಳೆಯೊ
ಳಂಬಿಗನ ಕಿರುದೋಣಿ
ಪ್ರಸ್ಥಾನ ಗೀತೆಯನು
ಹೇಳುತ್ತಿತ್ತು

ಬರುವ ಮುಂದಿನ ದಿನದ
ನವನವೋದಯಕಾಗಿ
ಪ್ರಕೃತಿ ತಪವಿರುವಂತೆ
ತೋರುತ್ತಿತ್ತು

ಶಾಂತರೀತಿಯೊಳಿರುಳು
ಮೆಲ್ಲಮೆಲ್ಲನೆ ಉರುಳಿ
ನಾಳಿನ ಶುಭೋದಯವ
ಸಾರುತ್ತಿತ್ತು

## ಕವಿ ಪರಿಚಯ



ಎಸ್.ವಿ. ಪರಮೇಶ್ವರಭಟ್ಟ ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿಯವರು. ಮೈಸೂರು ಮತ್ತು ಮಂಗಳೂರು ವಿಶ್ವವಿದ್ಯಾಲಯಗಳಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿರುವ ಇವರನ್ನು ಕನ್ನಡದ ಶ್ರೇಷ್ಠ ಕವಿ, ಅನುವಾದಕ, ಸಾಹಿತ್ಯ ಪರಿಚಾರಕರೆಂದು ಗುರುತಿಸಲಾಗಿದೆ. ಉತ್ತಮ ವಿಮರ್ಶಕರೂ, ಸರಸ ವಾಗ್ಮಿಗಳೂ ಆಗಿದ್ದ ಇವರು ಸಂಸ್ಕೃತ ಸಾಹಿತ್ಯದಲ್ಲಿ ಪ್ರಸಿದ್ಧವಾಗಿರುವ ಭರ್ತೃಹರಿಯ ಶತಕತ್ರಯ, ಜಯದೇವನ ಗೀತಗೋವಿಂದ, ಅಮರಶತಕ, ಹಾಲನ ಗಾಥಾಸಪ್ತಶತಿ, ಭಾಸನ ಹಾಗೂ ಕಾಳಿದಾಸನ ಕೃತಿಗಳನ್ನೆಲ್ಲ ಭಾಷಾಂತರಿಸಿ ಕನ್ನಡಕ್ಕೆ ತಂದಿದ್ದಾರೆ. ರಾಜ್ಯ ಮತ್ತು ಕೇಂದ್ರ ಸಾಹಿತ್ಯ ಅಕ್ಯಾಡಮಿ ಪುರಸ್ಕಾರ, ಆರ್ಯಭಟ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಸದಸ್ಯತ್ವ ಇವರಿಗೆ ಲಭಿಸಿದೆ.

ಪ್ರಸ್ತುತ ಕವನವನ್ನು ಅವರ 'ರಾಗಿಣಿ' ಸಂಕಲನದಿಂದ ಆರಿಸಿಕೊಳ್ಳಲಾಗಿದೆ.



## ಓದಿ ತಿಳಿಯಿರಿ

ಮುಗಿಲು–ಮೋಡ; ಮುಗುಳು–ಮೊಗ್ಗು ; ಹೊದರು–ಪೊದರು; ನರುಗಂಪು–ಪರಿಮಳ; ಇರುಳು–ರಾತ್ರಿ; ಉದರ–ಹೊಟ್ಟೆ; ಅಂಬಿಗ–ದೋಣಿ ನಡೆಸುವವ;

## ಗಮನಿಸಿ ತಿಳಿಯಿರಿ

ಜೋಗುಳ– ಮಕ್ಕಳನ್ನು ಮಲಗಿಸುವಾಗ ಹಾಡುವ ಹಾಡು, ಲಾಲಿ ಹಾಡು
ಪ್ರಸ್ಥಾನಗೀತೆ – ಸಂಚಾರದ ಸಂದರ್ಭದಲ್ಲಿ ಹಾಡುವ ಹಾಡು
ನವೋದಯ – ಹೊಸ ಹುಟ್ಟು, ಒಂದು ಸಾಹಿತ್ಯ ಸಂಪ್ರದಾಯ
ಶುಭೋದಯ – ಶುಭ ಮುಂಜಾನೆ

## ಅಭ್ಯಾಸ ಚಟುವಟಿಕೆ

ಅ. **ಕೆಳಗೆ ಕೊಟ್ಟಿರುವ ಪ್ರತಿಯೊಂದು ಪ್ರಶ್ನೆಗೂ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಚಂದಿರ ಮಲಗಲು ಏನನ್ನು ತೊಟ್ಟಿಲನ್ನಾಗಿ ಮಾಡಿಕೊಂಡಿದ್ದನು?

೨. ಯಾರು ಚಂದಿರನನ್ನು ಜೋಗುಳ ಹಾಡಿ ತೂಗುತ್ತಿದ್ದರು?

೩. ಕವಿ ಕಂಡ ಇರುಳು ಹೇಗೆ ಸಾಗುತ್ತಿತ್ತು?

೪. ಯಾವುದು ಪ್ರಸ್ಥಾನ ಗೀತೆಯನ್ನು ಹೇಳುತ್ತಿತ್ತು?

೫. ಪ್ರಕೃತಿ ಯಾವುದಕ್ಕಾಗಿ ತಪಸ್ಸು ಮಾಡುತ್ತಿತ್ತು?

೬. ಇರುಳು ಹೇಗೆ ಉರುಳುತ್ತಿತ್ತು?

ಆ. ಕೆಳಗಿನ ಪ್ರತಿಯೊಂದು ಪ್ರಶ್ನೆಗೂ ಮೂರು/ ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಚಂದಿರನ ಮಲಗುವಿಕೆ, ಇರುಳು ಸಾಗುವ ದೃಶ್ಯವನ್ನು ಕವಿ ಎಸ್.ವಿ. ಪರಮೇಶ್ವರಭಟ್ಟರು ಹೇಗೆ ವರ್ಣಿಸಿದ್ದಾರೆ?

೨. ಇರುಳಿನಲ್ಲಿ ಕವಿ ಹೇಳಿದ ಜೇನುಗನಸಿನ ಹಾಡು ಮತ್ತು ಅಂಬಿಗನ ಕಿರುದೋಣಿಯ ಪ್ರಸ್ಥಾನ ಗೀತೆ ಕುರಿತು ತಿಳಿಸಿರಿ.

೩. ಪ್ರಕೃತಿಯ ತಪ ಮತ್ತು ಶುಭೋದಯಕ್ಕಾಗಿ ಇರುಳು ಉರುಳುವಿಕೆ ಕುರಿತು ಕವಿ ಹೇಗೆ ಕಲ್ಪನೆ ನೀಡಿದ್ದಾರೆ ವರ್ಣಿಸಿರಿ.

ಇ. ಈ ಕೆಳಗಿನ ಪ್ರಶ್ನೆಗೆ ಐದಾರು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಕವಿ ಕಂಡ ಒಂದು ರಾತ್ರಿಯ ದೃಶ್ಯವನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ.

ಈ. ಈ ವಾಕ್ಯಗಳಲ್ಲಿ ಬಿಟ್ಟು ಹೋಗಿರುವ ಸ್ಥಳವನ್ನು ಕೆಳಗೆ ನೀಡಿರುವ ಪದಗಳಿಂದ ಸೂಕ್ತವಾಗಿ ತುಂಬಿರಿ.

೧. ಚಂದಿರನನ್ನು ಜೋಗುಳ ಹಾಡಿ ತೂಗುತ್ತಿದ್ದುದು ____________

ಅ) ಗಾಳಿ ಬ) ತಾಯಿ ಕ) ವಾಹನ ಡ) ಮೋಲ

೨. ಹಕ್ಕಿಗಳು ಗೂಡುಗಳಲ್ಲಿ ____________ ಮುದುರಿ ಮಲಗಿದ್ದವು.

ಅ) ಕಾಲು ಬ) ಗರಿ ಕ) ಹಲ್ಲು ಡ) ಎಲೆ

೩. ಅಂಬಿಗನ ಕಿರುದೋಣಿ ____________ಗೀತೆ ಹೇಳುತ್ತಿತ್ತು.

ಅ) ಪ್ರಸ್ಥಾನ ಬ) ಜನಪದ ಕ) ಭಾವಗೀತೆ ಡ) ಭಜನಾಪದ

೪. ನವನವೋದಯಕ್ಕೆ ____________ ತಪವಿರುವಂತೆ ತೋರುತ್ತಿತ್ತು.

ಅ) ನೆಲ ಬ) ಗಿಡ ಕ) ಪ್ರಕೃತಿ ಡ) ಹೂವು

೫. ಇರುಳು ____________ರೀತಿಯಲ್ಲಿ ಉರುಳುತ್ತಿತ್ತು.

ಅ) ಶಾಂತ ಬ) ಕ್ರೋಧ ಕ) ಹಾಸ್ಯ ಡ) ಭಯ

ಉ. ಈ ಕೆಳಗೆ ನೀಡಲಾದ 'ಅ' ಪಟ್ಟಿಯಲ್ಲಿನ ಪದಗಳಿಗೆ 'ಬ' ಪಟ್ಟಿಯಲ್ಲಿನ ಪದಗಳನ್ನು ಸರಿ ಹೊಂದುವಂತೆ ಹೊಂದಿಸಿ ಬರೆಯಿರಿ.

| 'ಅ' | 'ಬ' |
|---|---|
| ೧. ಚಂದಿರ | ಅ) ಹೊಂಗನಸು |
| ೨. ಹಕ್ಕಿಗೂಡು | ಬ) ತಪ |
| ೩. ಕಿರುದೋಣಿ | ಕ) ಪ್ರಸ್ಥಾನಗೀತೆ |
| ೪. ಪ್ರಕೃತಿ | ಡ) ಜೋಗುಳ |
| | ಇ) ಉರುಳು |

## ವ್ಯಾಕರಣಾಭ್ಯಾಸ

**ದ್ವಿರುಕ್ತಿ :**

ಅವು **ದೊಡ್ಡದೊಡ್ಡ** ಗ್ರಂಥಗಳು.

ಅವರು **ಓಡಿಓಡಿ** ದಣಿದರು.

**ಈಗೀಗ** ಅವರಿಗೆ ವ್ಯಾಪಾರ ಆಗುತ್ತಿದೆ.

**ಬೇಗಬೇಗ** ನಡೆಯಿರಿ.

ಮೇಲಿನ ಉದಾಹರಣೆಗಳಲ್ಲಿ ಅಡಿಗೆರೆ ಎಳೆದಿರುವ ಪದಗಳೆಲ್ಲವನ್ನೂ ಎರಡೆರಡು ಬಾರಿ ಪ್ರಯೋಗಿಸಲಾಗಿದೆ. ಹೀಗೆ ಒಂದು ಶಬ್ದವನ್ನು ಎರಡೆರಡು ಬಾರಿ ಉಚ್ಚರಿಸುವುದನ್ನು ದ್ವಿರುಕ್ತಿ ಎನ್ನುತ್ತಾರೆ. ದ್ವಿರುಕ್ತಿಗಳ ಪ್ರಯೋಗದಿಂದ ಕೇಳುವ ಪದ ಮನಸ್ಸಿನ ಮೇಲೆ ಪರಿಣಾಮವುಂಟಾಗುತ್ತದೆ. ಭಾವನೆಗಳ ಅಭಿವ್ಯಕ್ತಿಗೆ ಪುಷ್ಟಿ ದೊರೆಯುತ್ತದೆ.

ನಿಲ್ಲುನಿಲ್ಲು, ಹೆಚ್ಚುಹೆಚ್ಚು, ಬನ್ನಿಬನ್ನಿ, ಬೇಡಬೇಡ, ಓಡುಓಡು, ಬೇಗಬೇಗ, ನಡೆನಡೆ

ಇತ್ಯಾದಿಗಳು ದ್ವಿರುಕ್ತಿಗಳಿಗೆ ಉದಾಹರಣೆಗಳಾಗಿರುತ್ತವೆ.



## ಪ್ರಾಯೋಗಿಕ ಚಟುವಟಿಕೆ

ಅ. ಈ ಕೆಳಗಿನ ಪದಗಳನ್ನು ನಿಮ್ಮ ತರಗತಿಯಲ್ಲಿ ಗಟ್ಟಿಯಾದ ಧ್ವನಿಯಲ್ಲಿ ಹೇಳಿರಿ.

ತಿಳಿಮುಗಿಲ ತೊಟ್ಟಿಲು, ಗರಿಮುದುರಿ ಮಲಗು, ಮುಗುಳಿರುವ ಹೊದರು, ತುಂಬು ನೀರಿನ ಹೊಳೆ

ಆ. ಈ ಪದ್ಯದ ೫ ಮತ್ತು ೬ ನೆಯ ನುಡಿಗಳನ್ನು ಕಂಠಪಾಠ ಮಾಡಿರಿ.

ಇ. ಬೆಳದಿಂಗಳ ಊಟದ ಅನುಭವ ಕುರಿತು ನಿಮ್ಮ ಸಹಪಾಠಿಗಳ ಜೊತೆ ಅಭಿಪ್ರಾಯ ಹಂಚಿಕೊಳ್ಳಿರಿ.



ಈ. ತುಂಬು ನೀರಿನ ಹೊಳೆಯಲ್ಲಿ ಅಂಬಿಗನ ಕಿರುದೋಣಿ ಸಾಗುತ್ತಿರುವ ಚಿತ್ರ ಆಧರಿಸಿ ಐದು ವಾಕ್ಯ ಬರೆಯಿರಿ.

ಉ. ನಿಸರ್ಗ ವರ್ಣನೆಯ ಗೀತೆಗಳನ್ನು ಸಂಗ್ರಹಿಸಿ ಓದಿರಿ.

# ಪೂರಕ ಓದು

## ಚಂದ್ರ

–ಅಂಬಿಕಾತನಯದತ್ತ

ಬಿದಿಗೆ ಚಂದ್ರ ಬಂದ ನೋಡು
ದೀಪ ಹಚ್ಚಿದಂತೆ ಜೋಡು
ಯಾರ ಮನೆಯು ಅಲ್ಲಿ ಇಹುದೊ
ಯಾರು ಬಲ್ಲರು?

ಅಗೋ ಚವತಿ ಚಂದ್ರ ನೋಡು
ಮೂಡಿದಂತೆ ಎರಡು ಕೋಡು
ಮೃಗವು ಎಲ್ಲಿ ಇಹುದೊ ಏನೊ
ನಾನು ಕಾಣೆನು
ಇಂಥ ಚಿತ್ರ ಬರೆದನಿಲ್ಲಿ
ಯಾವ ಜಾಣನು?

ಅಷ್ಟಮಿ ಚಂದಿರನು ಬಂದ
ಅರ್ಧ ಬಿಟ್ಟು ಅರ್ಧ ತಿಂದ
ಉಂಡಿ ಚೆಲ್ಲಿ ಕೊಟ್ಟನಿಲ್ಲಿ
ಹುಡುಗನಾವನು?
ಕಾಣೆ ಅತ್ತ ಇತ್ತ ಎತ್ತು
ಅವನ ಠಾವನು.

ಬಂದನು ಹುಣ್ಣಿಮೆಯ ಚಂದ್ರ
ಬೆಳದಿಂಗಳು ನಿಬಿಡ ಸಾಂದ್ರ
ಅಲ್ಲ ಅಲ್ಲ ಮುಗಿಲು ತುಂಬ
ಇಹುದು ಮಜ್ಜಿಗೆ
ಬೆಣ್ಣೆ ಮುದ್ದೆ ಮೇಲೆಯೊಂದು
ಹೇಳು ಅಜ್ಜಿಗೆ.

❋ ❋ ❋

ಗದ್ಯಪಾಠ

# ೧೦. ಸಂತಮೇರಿ ದ್ವೀಪ

ಆಶಯ: ಸೌರವ್ಯೂಹದಲ್ಲಿ ಭೂಮಿಯು ಒಂದು ಸುಂದರ ಗ್ರಹವಾಗಿದೆ. ಈ ಭೂಮಿ ನೂರಾರು ನದಿಗಳು, ಸಾಗರಗಳು, ದ್ವೀಪಗಳು, ಬೆಟ್ಟಗುಡ್ಡಗಳು, ಕಾಡುಗಳು, ಪರ್ವತಗಳು, ಅಗ್ನಿಪರ್ವತಗಳು ಮುಂತಾದವುಗಳಿಂದ ಕೂಡಿದೆ. ಇಲ್ಲೆಲ್ಲ ಪ್ರಕೃತಿ ನಿರ್ಮಿಸಿರುವ ಅನೇಕ ವಿಸ್ಮಯಗಳನ್ನು ನೋಡಬಹುದು. ಕರ್ನಾಟಕದಲ್ಲಿ ಜಗತ್ತಿನಲ್ಲೇ ವಿಶಿಷ್ಟವಾದ ಲಕ್ಷಣಗಳನ್ನು ಹೊಂದಿರುವ ಭೂವಿಸ್ಮಯಗಳಿವೆ. ಅವುಗಳಲ್ಲಿ ಒಂದು ಸಂತಮೇರಿ ದ್ವೀಪದ ಕಂಬ ರಚನೆಗಳು. ಇಂತಹ ಭೂವೈಜ್ಞಾನಿಕ ಸ್ಮಾರಕಗಳನ್ನು ರಕ್ಷಿಸಬೇಕು.





ಬೇಸಿಗೆ ರಜೆ ಪ್ರಾರಂಭವಾಗಿತ್ತು. ರವಿ ಮತ್ತು ಅವನ ಗೆಳೆಯರು ಉಡುಪಿಗೆ ಹೋಗುವ ತಯಾರಿ ನಡೆಸಿದ್ದರು. ರವಿಯ ಚಿಕ್ಕಪ್ಪನವರು ಉಡುಪಿಯಲ್ಲಿದ್ದುದರಿಂದ ಅಲ್ಲಿಗೆ ಹೋಗುವುದು, ಮರುದಿನ ಅಲ್ಲಿಂದ ಮಲ್ಪೆ ಸಮುದ್ರ ತೀರಕ್ಕೆ ಮೂರು ಕಿಲೋಮೀಟರ್ ದೂರದಲ್ಲಿರುವ ಸಂತಮೇರಿ ದ್ವೀಪಕ್ಕೆ ಹೋಗುವುದೆಂದು ನಿರ್ಧರಿಸಲಾಗಿತ್ತು.

ಶಿವಮೊಗ್ಗೆಯಿಂದ ಹೊರಟು ರವಿ, ಅವನ ತಂಗಿ ರಶ್ಮಿ ಮತ್ತು ಸ್ನೇಹಿತರಾದ ಜಾನ್, ತೇಜು, ಸಲೀಂ ಸಂಜೆಯ ಹೊತ್ತಿಗೆ ಉಡುಪಿ ತಲುಪಿದರು. ಎಲ್ಲರಿಗೂ ಬೆಳಗಾದೊಡನೆಯೇ ದ್ವೀಪಕ್ಕೆ ಹೋಗುವ ಕಾತರ. ರವಿಯ ಚಿಕ್ಕಪ್ಪ ಮಕ್ಕಳನ್ನೆಲ್ಲಾ ಕರೆದುಕೊಂಡು ಮಲ್ಪೆ ಸಮುದ್ರ ತೀರಕ್ಕೆ ಬಂದರು. ಇದೇ ಮೊದಲ ಬಾರಿ ಸಮುದ್ರ ನೋಡುತ್ತಿದ್ದ ತೇಜೂನ ಸಂತೋಷಕ್ಕೆ ಪಾರವೇ ಇರಲಿಲ್ಲ. ಸ್ವಲ್ಪ ಹೊತ್ತು ಸಮುದ್ರ ತೀರದಲ್ಲಿ ಆಟವಾಡಿದ ಮಕ್ಕಳೆಲ್ಲ ದ್ವೀಪದ ಕಡೆಗೆ ಹೋಗುವ ದೋಣಿಗಳತ್ತ ನಡೆದರು.

'ಎಲ್ಲಿ ನೋಡಿದರೂ ನೀರೇ ನೀರು, ಎಷ್ಟು ಅದ್ಭುತ!' –ಜಾನ್ ಅಚ್ಚರಿಯಿಂದ ನೋಡುತ್ತಾ ಹೇಳಿದ. 'ಇಲ್ಲಿ ನೋಡು ರಶ್ಮಿ ದೋಣಿ ತಯಾರಾಗಿ ನಿಂತಿದೆ'!. ತೇಜು, ರವಿ, ಜಾನ್ ಎಲ್ಲಾ ದಡದಡ ಓಡುತ್ತಾ ದೋಣಿಯ ಹತ್ತಿರ ಬಂದರು. ರವಿಯ ಚಿಕ್ಕಪ್ಪ ನಿಧಾನವಾಗಿ ಮಕ್ಕಳನ್ನೆಲ್ಲಾ ದೋಣಿಗೆ ಹತ್ತಿಸಿ ತಾವೂ ಹತ್ತಿದರು. ಸುಂದರವಾದ ಸಮುದ್ರವನ್ನೇ ನೋಡುತ್ತಾ ಮಕ್ಕಳೆಲ್ಲಾ ಮಾತೇ ಮರೆತವರಂತೆ ಕುಳಿತಿದ್ದರು.

ಭೂಭಾಗ ಕಾಣುತ್ತಿದ್ದಂತೆಯೇ ಸಲೀಂ ಜೋರಾಗಿ ಕೂಗಿದ. 'ಅಲ್ಲಿ ನೋಡಿ ದ್ವೀಪ ಕಾಣುತ್ತಿದೆ. ಆ ಕಡೆ ಎಷ್ಟೊಂದು ತೆಂಗಿನ ಮರಗಳಿವೆ.' ಹೌದು ಹೌದು, ಅದಕ್ಕೇ ಆ ದ್ವೀಪಕ್ಕೆ ಕೋಕನಟ್ ಐಲೆಂಡ್ ಎನ್ನುತ್ತಾರೆ, ಅಲ್ಲವೇ ಚಿಕ್ಕಪ್ಪ? –ರಶ್ಮಿ ಕೇಳಿದಳು. 'ಸರಿಯಾಗಿ ಹೇಳಿದೆ. ಈ ದ್ವೀಪ ದೊಡ್ಡದು. ದಕ್ಷಿಣಕ್ಕೆ ಇನ್ನೊಂದು ಪುಟ್ಟ ದ್ವೀಪವಿದೆ. ಅಲ್ಲಿ ನೌಕೆಗಳಿಗೆ ದಾರಿ ತೋರಿಸುವ ದೀಪದ ಮನೆ ಇದೆ. ಇಲ್ಲಿರುವ ನಾಲ್ಕು ದ್ವೀಪಗಳನ್ನು ಸೇರಿಸಿ ಸಂತ ಮೇರಿ ದ್ವೀಪ ಎನ್ನುತ್ತಾರೆ.' ಚಿಕ್ಕಪ್ಪ ವಿವರಿಸಿದರು.

'ಇದಕ್ಕೆ ಸಂತಮೇರಿ ದ್ವೀಪ ಎಂದು ಏಕೆ ಹೆಸರು ಬಂತು?'–ಸಲೀಂ ಪ್ರಶ್ನಿಸಿದ. 'ಮಕ್ಕಳೇ ನೀವೆಲ್ಲಾ ಭಾರತದ ಅನ್ವೇಷಣೆಗೆ ಬಂದ ವಾಸ್ಕೋ–ಡ–ಗಾಮನ ಹೆಸರು ಕೇಳಿದ್ದೀರಲ್ಲವೇ? ಸುಮಾರು ೧೪೯೮ರಲ್ಲಿ ಅವನು ಮೊದಲು ಈ ಭಾಗಕ್ಕೆ ಬಂದಾಗ ಬಹಳ ಸಂತೋಷಪಟ್ಟು , ದೇವತೆ ಸಂತಮೇರಿಯ ನೆನಪಿಗಾಗಿ ಈ ದ್ವೀಪಕ್ಕೆ ಸಂತಮೇರಿ ದ್ವೀಪ ಎಂದು ಹೆಸರಿಟ್ಟ.' ಚಿಕ್ಕಪ್ಪನ ಮಾತು ಮುಗಿಯುವಷ್ಟರಲ್ಲಿ ದೋಣಿ ದ್ವೀಪದ ದಡಕ್ಕೆ ಬಂತು. ಮಕ್ಕಳೆಲ್ಲ ಒಬ್ಬೊಬ್ಬರಾಗಿ ದೋಣಿ ಇಳಿದು ಮರಳತೀರವನ್ನು ಸೇರಿದರು. 'ಅಬ್ಬಾ ಎಷ್ಟು ಸುಂದರವಾಗಿದೆ!. ಸುತ್ತಲೂ ಸಮುದ್ರದ ನೀರು, ನಡುವೆ ಭೂಮಿ.' ರಶ್ಮಿ ಆಶ್ಚರ್ಯದಿಂದ ಕಣ್ಣರಳಿಸಿದಳು.

ರವಿ, ಜಾನ್, ತೇಜು, . .ಎಲ್ಲರೂ ನನ್ನ ಜೊತೆ ಬನ್ನಿ. ಇಲ್ಲಿರುವ ನಿಜವಾದ ಅದ್ಭುತಗಳೆಂದರೆ ಇಲ್ಲಿನ ಕಂಬ ರಚನೆಗಳು. ಅವು ಶಿಲ್ಪಿಯೊಬ್ಬ ಸುಂದರವಾಗಿ ಕೆತ್ತಿರುವನೇನೋ ಎನ್ನುವಂತೆ ಕಾಣುತ್ತವೆ. ಎಲ್ಲವನ್ನೂ ನಿಧಾನವಾಗಿ ನೋಡೋಣ. ಚಿಕ್ಕಪ್ಪ ಮಕ್ಕಳನ್ನು ಕಂಬ ರಚನೆಗಳತ್ತ ಕರೆದುಕೊಂಡು ಹೋದರು.

'ಅರೇ, ಇವು ಎಷ್ಟು ಸುಂದರವಾಗಿವೆ! ಇದು ಹೇಗಾಯಿತು?' ತೇಜುವಿನ ಪ್ರಶ್ನೆ ತೂರಿಬಂತು. ಭೂವೈಜ್ಞಾನಿಕವಾಗಿ ಇವು ಬಹಳ ಮಹತ್ವ ಪಡೆದಿರುವ ರಚನೆಗಳು. ಮಕ್ಕಳೇ ನಿಮಗೆಲ್ಲಾ ಜ್ವಾಲಾಮುಖಿಗಳ ಬಗೆಗೆ ಗೊತ್ತಿದೆಯಲ್ಲವೆ? ಚಿಕ್ಕಪ್ಪ ಮಕ್ಕಳ ಕಡೆ ನೋಡುತ್ತಾ ಕೇಳಿದರು. 'ಅದೇ ನಮ್ಮ ಭೂಗೋಲದ ಶಿಕ್ಷಕರು ಹೇಳಿದ್ದರಲ್ಲಾ ಬೆಂಕಿಯನ್ನು ಉಗುಳುವ ಪರ್ವತಗಳು, ಅದೇ ತಾನೇ?'–ಸಲೀಂ ಕೇಳಿದ. 'ಸರಿಯಾಗಿ ಹೇಳಿದೆ.' ಚಿಕ್ಕಪ್ಪ ಮುಂದುವರಿಸಿದರು. 'ಸುಮಾರು ಐದಾರು ಕೋಟಿ ವರ್ಷಗಳ ಹಿಂದೆ ಭಾರತದ ದಕ್ಷಿಣ ಭಾಗದಲ್ಲಿ ಜ್ವಾಲಾಮುಖಿಗಳ ಸರಣಿಯೇ ಉಂಟಾಗಿರಬಹುದು. ಆಗ ಹರಿದ ಶಿಲಾರಸ ಗಟ್ಟಿಯಾಗಿ ದಖ್ಖನ್ ಪ್ರಸ್ಥಭೂಮಿ ಆಯಿತು. ಅದೇ ಸಮಯದಲ್ಲಿ ಸಂತಮೇರಿ ದ್ವೀಪಗಳೂ ರೂಪುಗೊಂಡಿರಬಹುದು ಎಂಬುದು ವಿಜ್ಞಾನಿಗಳ ಅಭಿಪ್ರಾಯ.'–ಚಿಕ್ಕಪ್ಪ ಮಕ್ಕಳೊಂದಿಗೆ ಮುಂದೆಹೊರಟರು.



'ಜ್ವಾಲಾಮುಖಿಗಳಿಂದ ಹರಿದುಬಂದ ಶಿಲಾರಸವು ಗಟ್ಟಿಯಾಗಿ ಸಮತಟ್ಟಾಗದೆ ಕಂಬಗಳ ಹಾಗೆ ಹೇಗಾದವು?'– ರವಿ ಕುತೂಹಲದಿಂದ ಕೇಳಿದ.' ಹೇಳುತ್ತೇನೆ ಆತುರ ಬೇಡ. ಮಕ್ಕಳೇ ನೀವು ಬೇಸಿಗೆಯಲ್ಲಿ ಕೆರೆಯು ಒಣಗಿ, ತಳದ ಜೇಡಿಮಣ್ಣು ಬಿಸಿಲಿಗೆ ಬಿರುಕು ಬಿಟ್ಟಿದ್ದನ್ನು ನೋಡಿರಬಹುದು. 'ಹಾಂ, ನಾನು ನೋಡಿದ್ದೇನೆ. ಕೆರೆಯ ಅಂಗಳವೆಲ್ಲಾ ಆಟದ ಮೈದಾನವಾಗಿರುತ್ತದೆ.' –ತೇಜು ದನಿಗೂಡಿಸಿದ. 'ಅದೇ ರೀತಿ ಶಿಲಾರಸ ಕೂಡ ಕ್ರಮೇಣ ನಿಧಾನವಾಗಿ ಹರಿದು ಕ್ರಮೇಣ ತಣ್ಣಗಾಗಲು ಪ್ರಾರಂಭಿಸುತ್ತದೆ. ಆದರೆ ಅದು ತಣ್ಣಗಾಗುವ ಮೊದಲೇ ಲಂಬ ದಿಕ್ಕಿನಲ್ಲಿ ಸೆಳೆತ ಉಂಟಾದರೆ ಕಂಬ ರಚನೆಗಳಾಗಿ ಗಟ್ಟಿಯಾಗುತ್ತದೆ. ಇಲ್ಲಿ ನೋಡಿ, ಹೇಗೆ ನೇರವಾಗಿ ನಿಂತ ಈ ಶಿಲೆಗಳು ಕಂಬಗಳ ಹಾಗೆ ಇವೆ.' ಹೇಳುತ್ತಾ ಚಿಕ್ಕಪ್ಪ ಮುಂದೆ ಹೆಜ್ಜೆ ಹಾಕಿದರು.

'ಅರೇ ರವಿ, . . ಇಲ್ಲಿ ಬಾ, . .ನೋಡು ಈ ಶಿಲೆಗಳು ಹೇಗಿವೆ? ತರಕಾರಿ ಮಾರುವ ನರಸಪ್ಪನ ಬಳಿ ಇರುವ ತೂಕದ ಬಟ್ಟುಗಳನ್ನು ಒಂದರ ಮೇಲೊಂದು ಜೋಡಿಸಿದಂತೆ ಕಾಣುತ್ತದೆ.' ಎಲ್ಲರ ಗಮನವನ್ನೂ

ಸೆಳೆದ ಜಾನ್. ‘ಹೌದು, ಇದು ಹೇಗಾಗಿರಬಹುದು? –ರಶ್ಮಿಯ ಪ್ರಶ್ನೆ. ‘ಶಿಲೆ ಗಟ್ಟಿಯಾದ ಮೇಲೆ ಕಂಬಕ್ಕೆ ಅಡ್ಡಲಾಗಿ ಬಿರುಕುಗಳು ಮೂಡಿದಾಗ ಅದು ತೂಕದ ಬಟ್ಟುಗಳನ್ನು ಒಂದರ ಮೇಲೊಂದನ್ನು ಪೇರಿಸಿದಂತೆ ಕಾಣುತ್ತದೆ. ಹತ್ತಿರ ಬಂದು ನೋಡಿ.’ ಚಿಕ್ಕಪ್ಪ ಮಕ್ಕಳನ್ನೆಲ್ಲಾ ಕರೆದರು. ‘ಅಬ್ಬಾ, ಇದು ಆಶ್ಚರ್ಯವೇ ಸರಿ. ಚಿಕ್ಕಪ್ಪ ಇಂತಹ ಸ್ತಂಭ ರಚನೆ ಬೇರೆಲ್ಲಿಯಾದರೂ ಇದೆಯಾ?’–ತೇಜು ಕೇಳಿದ. ಹಾ, ಹೌದು ಈ ರೀತಿಯ ರಚನೆಗಳು ಬೇರೆ ಬೇರೆ ಕಡೆ ಇವೆ ಎಂದು ಹೇಳುತ್ತಾ ಚಿಕ್ಕಪ್ಪ ಮುಂದೆ ನಡೆದರು.

ಎಲ್ಲರೂ ಮರಳ ಮೇಲೆ ಕುಳಿತರು. ಮಕ್ಕಳು ಮನೆಯಿಂದ ತಂದಿದ್ದ ತಿಂಡಿ ಡಬ್ಬಿಗಳನ್ನು ತೆಗೆದು, ಹಂಚಿಕೊಂಡು ತಿನ್ನತೊಡಗಿದರು. ರಶ್ಮಿಯ ಕಣ್ಣು ಆ ಚಿತ್ತಾಕರ್ಷಕ ಶಿಲಾರಚನೆಗಳ ಮೇಲೇ ಇತ್ತು. ಚಿಕ್ಕಪ್ಪ ಈ ಕಲ್ಲುಗಳನ್ನು ಕಟ್ಟಡ ಕಟ್ಟಲು ಉಪಯೋಗಿಸುತ್ತಾರೆಯೆ? – ರವಿ ಕೇಳಿದ. ನಮ್ಮ ದೇಶದಲ್ಲಿಯೇ ಮುಂಬೈನ ಅಂಧೇರಿಯಲ್ಲಿ ಇಂಥ ಕಂಬ ರಚನೆಯ ಶಿಲೆಗಳು ಸಾಕಷ್ಟಿದ್ದವು. ಅದರ ಮಹತ್ವ ತಿಳಿಯದೆ ಜನರು ಅವುಗಳನ್ನು ಕಟ್ಟಡಕ್ಕೆ ಬಳಸಿದ್ದರಿಂದ ಈಗ ಅವು ಅಲ್ಲಿದ್ದವು ಎಂಬ ಗುರುತೂ ಇಲ್ಲ. ಪ್ರಕೃತಿ ನಿರ್ಮಿತ ಇಂತಹ ಶಿಲ್ಪಗಳನ್ನು ಹಾಳು ಮಾಡಬಾರದು. ಚಿಕ್ಕಪ್ಪ ಬೇಸರದಿಂದ ಹೇಳಿದರು. ‘ಸರ್ಕಾರ ಇವುಗಳನ್ನು ರಕ್ಷಿಸಲು ಏನೂ ಮಾಡುತ್ತಿಲ್ಲವೆ?’– ಸಲೀಂ ಕೇಳಿದ. ‘ಯಾಕಿಲ್ಲ, ಸರ್ಕಾರ ಇದನ್ನು ರಾಷ್ಟ್ರೀಯ ಸ್ಮಾರಕವೆಂದು ೧೯೭೫ರಲ್ಲಿಯೇ ಘೋಷಿಸಿ ಸಂರಕ್ಷಿಸುತ್ತಿದೆ. ಸರ್ಕಾರದ ಜೊತೆ ನಾವೂ ಇಂತಹವನ್ನು ರಕ್ಷಿಸಲು ಮುಂದೆ ಬರಬೇಕು.’ ಚಿಕ್ಕಪ್ಪ ವಿವರವಾಗಿ ಹೇಳಿದರು.

ತಿಂಡಿ ತಿಂದು, ಮನದಣಿಯ ಆಟವಾಡಿದ ಮಕ್ಕಳು ಮರಳಿ ಉಡುಪಿಗೆ ಬಂದಾಗ ರಾತ್ರಿಯಾಗಿತ್ತು. ಬೆರಗು ಮೂಡಿಸುವ ಶಿಲಾರಚನೆಗಳು ಹಾಗು ಸುಂದರ ಸಂತಮೇರಿ ದ್ವೀಪದ ಸವಿ ನೆನಪಿನೊಂದಿಗೆ ಮುಂದಿನ ರಜಾ ದಿನಗಳಲ್ಲಿ ಎಲ್ಲಿಗೆ ಪ್ರವಾಸ ಮಾಡೋಣ ಎಂದು ಚರ್ಚಿಸುತ್ತಿದ್ದರು.



## ಓದಿ ತಿಳಿಯಿರಿ

ದ್ವೀಪ– ನೀರಿನಿಂದ ಸುತ್ತುವರಿದ ಭೂಭಾಗ. ಅನ್ವೇಷಣೆ– ಹುಡುಕುವುದು. ಕಾತುರ– ಆತುರ, ಉತ್ಸುಕತೆ; ವಿಸ್ಮಯ– ಆಶ್ಚರ್ಯ, ಅಚ್ಚರಿ; ಬಿರುಕು–ಒಡಕು; ನೌಕೆ– ಹಡಗು, ನಾವೆ; ಹೇರಳ– ಸಾಕಷ್ಟು, ಬಹಳ; ಪೇರಿಸು– ಒಂದರ ಮೇಲೊಂದು ಜೋಡಿಸು.

## ಗಮನಿಸಿ ತಿಳಿಯಿರಿ

ಚಿತ್ತಾಕರ್ಷಕ– ಮನಸ್ಸು ಸೆಳೆಯುವಂತಹ; ಶಿಲ್ಪಿ– ಕಲ್ಲಿನಲ್ಲಿ ವಿಗ್ರಹ ಕೆತ್ತುವವನು; ಜ್ವಾಲಾಮುಖಿ– ಬೆಂಕಿಯನ್ನು ಉಗುಳುವ ಪರ್ವತ; ಶಿಲಾರಸ– ಕಲ್ಲಿನ ರಸ; ತೂಕದ ಬಟ್ಟುಗಳು– ತೂಕ ಮಾಡಲು ಬಳಸುವ ಸಾಧನಗಳು; ಸ್ಮಾರಕ– ಪ್ರಸಿದ್ಧ ವ್ಯಕ್ತಿಗಳ, ಸ್ಥಳಗಳ ನೆನಪಿಗಾಗಿ ನಿರ್ಮಿಸಿದ್ದು; ದಖ್ಖನ್ ಪ್ರಸ್ಥಭೂಮಿ–ಭಾರತದ ದಕ್ಷಿಣ ಭಾಗ.

## ಅಭ್ಯಾಸ ಚಟುವಟಿಕೆಗಳು

**ಅ. ಈ ಕೆಳಗಿನ ಪ್ರತಿಯೊಂದು ಪ್ರಶ್ನೆಗೂ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಮಕ್ಕಳೆಲ್ಲಾ ಎಲ್ಲಿಗೆ ಪ್ರವಾಸಕ್ಕೆ ಹೋದರು?

೨. ಜ್ವಾಲಾಮುಖಿ ಎಂದರೇನು?

೩. ಮುಂಬೈನ ಯಾವ ಪ್ರದೇಶದಲ್ಲಿ ಕಂಬರಚನೆಯ ಶಿಲೆಗಳು ಇದ್ದವು?

೪. ಸರ್ಕಾರವು ಸಂತಮೇರಿ ದ್ವೀಪವನ್ನು ಏನೆಂದು ಘೋಷಣೆ ಮಾಡಿದೆ?

**ಆ. ಈ ಕೆಳಗಿನ ಪ್ರತಿಯೊಂದು ಪ್ರಶ್ನೆಗೂ ಮೂರು– ನಾಲ್ಕು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

೧. ಸಂತಮೇರಿ ದ್ವೀಪಕ್ಕೆ ಆ ಹೆಸರು ಬರಲು ಕಾರಣವೇನು?

೨. ದಖ್ಖನ್ ಪ್ರಸ್ಥಭೂಮಿ ಹೇಗೆ ರೂಪುಗೊಂಡಿತು?

೩. ಶಿಲಾ ಕಂಬ ರಚನೆಗಳಾದದ್ದು ಹೇಗೆ?

೪. ಸರ್ಕಾರ ಶಿಲ್ಪರಚನೆಗಳ ಸಂರಕ್ಷಣೆಗೆ ಯಾವ ಕ್ರಮಗಳನ್ನು ಕೈಗೂಂಡಿದೆ?

**ಇ. ಈ ಕೆಳಗಿನ ಬಿಟ್ಟ ಸ್ಥಳಗಳಲ್ಲಿ ಸರಿಯದ ಉತ್ತರವನ್ನು ಆರಿಸಿ ಬರೆಯಿರಿ .**

೧. ಸಂತಮೇರಿ ದ್ವೀಪಗಳಿರುವುದು ____________

ಅ. ಮಲ್ಪೆ ಸಮುದ್ರ ತೀರದ ಹತ್ತಿರ

ಬ. ರಾಮೇಶ್ವರ ಸಮುದ್ರ ತೀರದ ಹತ್ತಿರ

ಕ. ಗೋಕರ್ಣ ಸಮುದ್ರ ತೀರದ ಹತ್ತಿರ

ಡ. ಗೋವಾ ಸಮುದ್ರ ತೀರದ ಹತ್ತಿರ

೨. ದಖ್ಖನ್ ಪ್ರಸ್ಥಭೂಮಿ ರೂಪು ತಳೆದದ್ದು ____________

ಅ. ಸಮುದ್ರದ ನೀರಿನಿಂದ ಬ. ಭೂಮಿಯ ಸವೆತದಿಂದ

ಕ. ಶಿಲಾರಸ ಗಟ್ಟಿಯಾಗಿ ಡ. ಭೂಕಂಪ ಉಂಟಾಗಿ

೩. ಶಿಲಾರಸ ತಣ್ಣಗಾಗುವ ಮೊದಲೇ ಲಂಬ ದಿಕ್ಕಿನಲ್ಲಿ ಸೆಳೆತ ಉಂಟಾದರೆ ________

ಅ. ಪ್ರಸ್ಥ ಭೂಮಿಯಾಗುವುದು ಬ. ಕಂಬ ರಚನೆಯಾಗುವುದು

ಕ. ಪರ್ವತವಾಗುವುದು ಡ. ಭೂಕಂಪವಾಗುವುದು

೪. ಶಿಲೆಗಳು ತೂಕದ ಬಟ್ಟುಗಳನ್ನು ಒಂದರ ಮೇಲೆ ಒಂದನ್ನು ಪೇರಿಸಿದಂತೆ ಕಾಣುವುದು ____________

ಅ. ಶಿಲೆ ಗಟ್ಟಿಯಾಗಿ ಕಂಬಕ್ಕೆ ಲಂಬ ಬಿರುಕು ಮೂಡಿದಾಗ

ಬ. ಶಿಲೆ ಗಟ್ಟಿಯಾಗಿ ಕಂಬಕ್ಕೆ ಅಡ್ಡಲಾಗಿ ಬಿರುಕು ಮೂಡಿದಾಗ

ಕ. ಶಿಲೆ ಗಟ್ಟಿಯಾಗಿ ಕಂಬಕ್ಕೆ ಬಿರುಕು ಮೂಡದೇ ಇದ್ದಾಗ

ಡ. ಶಿಲೆ ಗಟ್ಟಿಯಾಗಿ ಕಂಬಕ್ಕೆ ಆಳವಾಗಿ ಬಿರುಕು ಮೂಡಿದಾಗ

**ಈ. ಈ ಕೆಳಗಿನ ಪದಗಳನ್ನು ಬಿಡಿಸಿ ಬರೆದು , ಸಂಧಿಯ ಹೆಸರು ತಿಳಿಸಿ.**

೧. ಹೊಸಗನ್ನಡ ೨. ಗಟ್ಟಿಗಲ್ಲು ೩. ಮಳೆಗಾಲ ೪. ಬೆಟ್ಟದಾವರೆ

ಉ. ನಿಮ್ಮ ಪ್ರವಾಸದ ಅನುಭವಗಳನ್ನು ಕುರಿತು , ನಿಮ್ಮ ಗೆಳೆಯ / ಗೆಳತಿಗೆ ಒಂದು ಪತ್ರ ಬರೆಯಿರಿ.

ಊ. ಈ ಕೆಳಗಿನ ವಾಕ್ಯಗಳಲ್ಲಿನ ಖಾಲಿಜಾಗವನ್ನು ಕೆಳಗೆ ಕೊಟ್ಟಿರುವ ದ್ವಿರುಕ್ತಿಗಳಲ್ಲಿ ಸರಿಯಾದವುಗಳನ್ನು ಆರಿಸಿ ಭರ್ತಿ ಮಾಡಿ.

೧. ಮಕ್ಕಳೆಲ್ಲಾ ______________ದೋಣಿಯ ಹತ್ತಿರ ಬಂದರು.

೨. __________ ಹೋದಂತೆ ದ್ವೀಪ ಕಾಣದಾಯಿತು .

೩. ಸಂಜೆಯಾಗುತ್ತಿದ್ದಂತೆಯೇ ಎಲ್ಲರೂ _____ ಮನೆಯ ಕಡೆಗೆ ಹೊರಟರು.

೪. ಚಿಕ್ಕಪ್ಪ ಮಕ್ಕಳ ______ ನಡೆದರು .

[ಜೊತೆ ಜೊತೆ, ಓಡಿ ಓಡಿ, ದೂರ ದೂರ, ಬೇಗ ಬೇಗ]

## ವ್ಯಾಕರಣಾಭ್ಯಾಸ

**ಅನುಕರಣಾವ್ಯಯ**

**ಈ ಕೆಳಗಿನ ವಾಕ್ಯಗಳಲ್ಲಿ ಗೆರೆ ಎಳೆದ ಪದಗಳನ್ನು ಗಮನಿಸಿ.**

೧. ನದಿ <u>ಜುಳು ಜುಳು</u> ಹರಿಯುತ್ತಿತ್ತು .

೨. ಮಳೆ <u>ಧೋ ಧೋ</u> ಎಂದು ಸುರಿಯುತ್ತಿತ್ತು .

೩. ಗಾಳಿ <u>ರೊಯ್ಯನೆ</u> ಬೀಸುತ್ತಿತ್ತು.

ಮೇಲಿನ ಅಡಿಗೆರೆಯೆಳೆದ ಪದಗಳಿಗೆ ವಿಶೇಷವಾದ ಅರ್ಥವೇನೂ ಇಲ್ಲ. ನಾಮಪದ, ಕ್ರಿಯಾಪದಗಳಂತೆ ಲಿಂಗ, ವಚನ, ವಿಭಕ್ತಿಗಳಿಂದ ರೂಪ ಭೇದವನ್ನು ಹೊಂದದೆ ಏಕರೂಪವಾಗಿರುವ ಇವುಗಳನ್ನು 'ಅವ್ಯಯಗಳು' ಎನ್ನುತ್ತಾರೆ. ಅರ್ಥವಿಲ್ಲದ ಈ ಪದಗಳು ಕೆಲಸ ನಡೆದ ರೀತಿಯನ್ನು ಅನುಕರಣೆ ಮಾಡಿ ಹೇಳುತ್ತವೆ. ಆದ್ದರಿಂದ ಇವುಗಳನ್ನು ಅನುಕರಣಾವ್ಯಯಗಳು ಎನ್ನುವರು.

**ಖಾಲಿ ಬಿಟ್ಟ ಜಾಗವನ್ನು ಕಂಸದಲ್ಲಿ ಕೊಟ್ಟ ಸರಿಯಾದ ಅನುಕರಣಾವ್ಯಯಗಳಿಂದ ಭರ್ತಿ ಮಾಡಿ.**

[ ಧಗ ಧಗ , ಸರ ಸರ , ಢಣ ಢಣ , ಫಳ ಫಳ ]

೧. ಗಂಟೆ ______ ಬಾರಿಸಿತು .

೨. ಬೆಂಕಿ ______ ಉರಿಯುತ್ತಿತ್ತು .

೩. ಸರವು ______ ಹೊಳೆಯುತ್ತಿತ್ತು.

೪. ಹಾವು ______ ಹರಿಯುತ್ತದೆ.

## ಪ್ರಾಯೋಗಿಕ ಚಟುವಟಿಕೆ

ಅ. ನಿಮ್ಮ ಜಿಲ್ಲೆಯ ಯಾವುದಾದರೊಂದು ಪ್ರವಾಸೀ ತಾಣದ ಬಗೆಗೆ ಪ್ರಬಂಧ ಬರೆಯಿರಿ.

ಬ. ಪ್ರವಾಸದಿಂದ ಆಗುವ ಪ್ರಯೋಜನಗಳ ಕುರಿತು, ನಿಮ್ಮ ತರಗತಿಯಲ್ಲಿ ಸ್ನೇಹಿತರ ಗುಂಪಿನಲ್ಲಿ ಚರ್ಚಿಸಿ.

ಕ. ಕರ್ನಾಟಕ ಪ್ರವಾಸೋದ್ಯಮ ಇಲಾಖೆಯ ಕಾರ್ಯಗಳನ್ನು ಕೇಳಿ ತಿಳಿಯಿರಿ.

ಡ. ಇಲ್ಲಿ ಕೊಟ್ಟಿರುವ ಸುಳಿವುಗಳನ್ನು ಗಮನಿಸಿ, ಪದಬಂಧವನ್ನು ಪೂರ್ತಿ ಮಾಡಿ.




### ಸುಳಿವುಗಳು

**ಮೇಲಿನಿಂದ ಕೆಳಗೆ**

೧. ನೀರಿನಿಂದ ಸುತ್ತುವರಿದ ಭೂಭಾಗ (೨)

೩. ನೋಡುವ ಆತುರ (೩)

೫. ತಿಂಡಿ ಇಡುವ ಪುಟ್ಟ ಪೆಟ್ಟಿಗೆ (೨)

**ಎಡದಿಂದ ಬಲಕ್ಕೆ**

೨. ದೊಡ್ಡದಾದ ಬೆಟ್ಟ (೩)

೪. ಸಮುದ್ರವನ್ನು ಹೀಗೂ ಕರೆಯುವರು (೩)



**ದೇಶ ಸುತ್ತು – ಕೋಶ ಓದು**

* * *

## ಪದ್ಯಪಾಠ

# ೧೧. ನಿರೀಕ್ಷೆ

– ಡಿ. ಎಸ್. ವೀರಯ್ಯ

**ಆಶಯ :** ಸಮಾಜದಲ್ಲಿ ಮೇಲು–ಕೀಳು, ಬಡವ – ಬಲ್ಲಿದ ಎಂಬಂತಹ ಅಸಮಾನತೆಗಳು ಇಂದಿಗೂ ಕೂಡ ಕಂಡುಬರುತ್ತವೆ. ಇಂತಹ ಅಸಮಾನತೆಗಳನ್ನು ಹೋಗಲಾಡಿಸಲು ದಾರ್ಶನಿಕರು, ಶರಣರು, ಸಾಧುಗಳು ಮತ್ತು ಸಂತರು ನಿರಂತರವಾಗಿ ಶ್ರಮಿಸಿದ್ದಾರೆ. "ದಯವಿಲ್ಲದ ಧರ್ಮ ಅದಾವುದಯ್ಯ ದಯವೇ ಬೇಕು ಸಕಲ ಪ್ರಾಣಿಗಳಲ್ಲಿ"– ಎಂಬ ಬಸವಣ್ಣನವರ ಮಾತು ಅಕ್ಷರಶ: ಸತ್ಯವಾಗಿದೆ. ಪ್ರೀತಿ, ಪ್ರೇಮ, ತಾಳ್ಮೆ, ಸಮಾನತೆ, ಇವುಗಳನ್ನು ಇಂದು ನಾವು ಅಳವಡಿಸಿಕೊಂಡಾಗಲೇ ಮಾನವೀಯತೆಯನ್ನು ಕಾಣಲು ಸಾಧ್ಯವಾಗುತ್ತದೆ. ನಿರೀಕ್ಷೆ ಪದ್ಯದಲ್ಲಿ ಕವಿ ಪ್ರಚಲಿತ ಸಮಾಜದಲ್ಲಿ ಕಂಡುಬರುತ್ತಿರುವ ತಾರತಮ್ಯ ಹೋಗಲಾಡಿಸಲು ಸಮಾನತೆಯ ದಿನಗಳು ಎಂದು ಬರುವವೊ ಎಂದು ಪರಿಪರಿಯಾಗಿ ಹಂಬಲಿಸಿದ್ದಾರೆ.

ಪ್ರೀತಿಯ ಗುಣಿ ತೆಗೆದು
ಪ್ರೇಮದ ಪಾತಿಯ ಮಾಡಿ
ನೀತಿಯ ಬೀಜವ ಬಿತ್ತಿ
ವಾತ್ಸಲ್ಯದ ಫಲವ ಪಡೆವ
ದಿನಗಳೆಂದು ಬರುವವೋ



ಹರಿವ ನೀರು ಇರುವ ನೆಲ
ಸುಳಿವ ಗಾಳಿ ಉಣ್ಣುವನ್ನ
ತೊಡುವ ಬಟ್ಟೆ ಸುಡುವ ಬೆಂಕಿ
ಎಲ್ಲರಿಗೂ ಒಂದೇ ಎಂಬ
ದಿನಗಳೆಂದು ಬರುವವೋ,

ದ್ವೇಷಾಸೂಯೆಗಳ ಬಂಡೆಯನ್ನು
ತಾಳ್ಮೆಯ ಸಿಡಿಮದ್ದು ಹಾಕಿ
ಸಿಡಿಸಿ ತೆಗೆದ ಸಹೋದರತೆಯ
ಸಸಿಗಳನ್ನು ಕಾಣುವಂಥ
ದಿನಗಳೆಂದು ಬರುವವೋ,

ಅಸಮಾನತೆಯ ಕಡಲಿನಲ್ಲಿ
ಸಮಾನತೆಯ ದೋಣಿ ಬಿಟ್ಟು
ತೇಲುತ ದಡ ಸೇರಿಕೊಂಡು
ಸಾರ್ಥಕತೆಯ ಪಡೆಯುವ
ದಿನಗಳೆಂದು ಬರುವವೋ,

ಜ್ಞಾನದ ಕಾರಂಜಿಯಲ್ಲಿ
ಅಜ್ಞಾನದ ಕೊಳೆಯ ತೊಳೆದು
ಜಾತಿಯ ವಿಷ ವೃಕ್ಷವನ್ನು
ಬೇರು ಸಹಿತ ಕಿತ್ತು ತೆಗೆವ
ದಿನಗಳೆಂದು ಬರುವವೋ

ರಕ್ತ ಬೀಜಾಸುರರ ಸಂತೆಯಲ್ಲಿ
ಗೊಡ್ಡು ಮೌಢ್ಯಗಳ ನಾಶ ಮಾಡಿ
ಹಿಂಸೆಯ ರಕ್ತ ಅಳಿಸಿ
ಅಹಿಂಸೆಯ ಕಂದನೆತ್ತಿ ಮಾನವತೆಯ ಸಾರುವ
ದಿನಗಳೆಂದು ಬರುವವೋ

**ಕವಿ ಪರಿಚಯ : ಡಿ. ಎಸ್. ವೀರಯ್ಯ :**



ಕೋಲಾರದವರಾದ ಡಿ.ಎಸ್. ವೀರಯ್ಯ ಸಾಮಾಜಿಕ ಕಾರ್ಯಕರ್ತರಾಗಿ, ವಕೀಲರಾಗಿ, ಬರಹಗಾರರಾಗಿ, ಪತ್ರಕರ್ತರಾಗಿ, ರಾಜಕಾರಣಿಯಾಗಿ ಪ್ರಸಿದ್ಧರು. ಇವರು ಕರ್ನಾಟಕ ಕಾರ್ಯನಿರತ ಪತ್ರಿಕೆಗಳ ಸಂಘ, ಕನ್ನಡ ಅಭಿವೃದ್ಧಿ ಪ್ರಾಧಿಕಾರಗಳ ಪದಾಧಿಕಾರಿಗಳಾಗಿ ಸೇವೆ ಸಲ್ಲಿಸಿದ್ದಾರೆ. ಕರ್ನಾಟಕ ಸರಕಾರದ ವಿಧಾನ ಪರಿಷತ್ತಿಗೆ ಎರಡನೆಯ ಬಾರಿ ಸದಸ್ಯರಾಗಿ ಆಯ್ಕೆಗೊಂಡಿದ್ದಾರೆ. 'ಗೆರೆಗಳು', ಬೇರುಗಳು'–ಕವನ ಸಂಕಲನಗಳು, ಕೂಡಲುಸ್ವಾಮಿ, ದಲಿತ ಚಿಂತನೆ ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಇವರಿಗೆ ಸಮಾಜರತ್ನ, ಬುದ್ಧರತ್ನ, ಬೆಂಗಳೂರು ರತ್ನ, ಸರ್.ಎಂ.ವಿಶ್ವೇಶ್ವರಯ್ಯ ಪ್ರಶಸ್ತಿಗಳು ದೊರಕಿವೆ. ಈ ಕವನವನ್ನು 'ಬೇರುಗಳು' ಸಂಕಲನದಿಂದ ಆರಿಸಲಾಗಿದೆ.



## ಓದಿ ತಿಳಿಯಿರಿ

**ಗುಣಿ** –ತಗ್ಗು , ಗುಂಡಿ ; **ಫಲ** – ಲಾಭ , ಬೆಳೆ ; **ಉಣ್ಣು** – ಊಟ ಮಾಡು ; **ತೊಡು** – ಧರಿಸು ; **ದಡ** – ದಂಡೆ ; **ವೃಕ್ಷ** – ಮರ ; **ಅಸುರ** – ರಾಕ್ಷಸ ; **ಗೊಡ್ಡು** – ನಿಷ್ಫಲ ; **ಮೌಢ್ಯ** – ತಿಳಿಗೇಡಿತನ , ದಡ್ಡತನ ; **ಅಳಿಸು** – ನಾಶಪಡಿಸು ; **ಕಂದ** – ಮಗು ; **ಕಾರಂಜಿ** – ಚಿಲುಮೆ; **ವಾತ್ಸಲ್ಯ** – ಪ್ರೀತಿ ;

## ಗಮನಿಸಿ ತಿಳಿಯಿರಿ

**ಪಾತಿ** – ಗಿಡದ ಸುತ್ತಲೂ ನೀರು ಹರಿಸಲು ಮಾಡಿರುವ ಮಡಿ

**ರಕ್ತಬೀಜಾಸುರ** – ಒಬ್ಬ ರಾಕ್ಷಸ. ಪರಮೇಶ್ವರನನ್ನು ತಪಸ್ಸಿನಿಂದ ಮೆಚ್ಚಿಸಿ, ತನ್ನ ದೇಹದಿಂದ ಬಿದ್ದ ಒಂದೊಂದು ತೊಟ್ಟು ರಕ್ತದಿಂದ ತನ್ನಷ್ಟೇ ಬಲಶಾಲಿಯಾದ ಒಬ್ಬ ರಾಕ್ಷಸ ಹುಟ್ಟುವಂತೆ ವರ ಪಡೆದವ.

**ಸಿಡಿಮದ್ದು** – ಬಂಡೆಗಳನ್ನು ಒಡೆಯಲು ಬಳಸುವ ಸ್ಫೋಟಕ ವಸ್ತು

## ಅಭ್ಯಾಸ ಚಟುವಟಿಕೆ

**ಅ. ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಪ್ರತಿಯೊಂದಕ್ಕೂ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಕವಿ ಯಾವ ಬೀಜ ಬಿತ್ತಬೇಕೆಂದು ಹಾರೈಸಿದ್ದಾರೆ?

೨. ದ್ವೇಷ ಅಸೂಯೆಗಳ ಬಂಡೆಯನ್ನು ಯಾವುದರಿಂದ ಸಡಿಲಿಸಬೇಕೆಂದು ಕವಿ ಹೇಳಿದ್ದಾರೆ?

೩. ಅಸಮಾನತೆಯ ಕಡಲಿನಲ್ಲಿ ಎಂತಹ ದೋಣಿ ಸಾಗಬೇಕಾಗಿದೆ?

೪. ಜ್ಞಾನದ ಕಾರಂಜಿಯಲ್ಲಿ ಯಾವ ಕೊಳೆ ತೊಳೆಯಬೇಕಾಗಿದೆ?

೫. ಗೊಡ್ಡು ಮೌಢ್ಯಗಳನ್ನು ಯಾವ ಸಂತೆಯಲ್ಲಿ ನಾಶಮಾಡಬೇಕೆಂದು ಕವಿ ಆಶಿಸಿದ್ದಾರೆ?

**ಆ. ಕೆಳಗಿನ ಪ್ರತಿಯೊಂದು ಪ್ರಶ್ನೆಗೂ ಮೂರು-ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಕವಿ ಯಾವ ಯಾವ ಮೌಲ್ಯಗಳಿಂದ ಕೂಡಿದ ದಿನಗಳಿಗಾಗಿ ಕಾಯುತ್ತಿದ್ದಾರೆ?

೨. ಸೃಷ್ಟಿಯಲ್ಲಿ ಎಲ್ಲರಿಗೂ ಸಮಾನವಾಗಿರುವ ಅಂಶಗಳಾವುವು?

೩. ಸಾರ್ಥಕತೆಯನ್ನು ಪಡೆಯುವ ಬಗೆಯನ್ನು ಕವಿ ಹೇಗೆ ಹೇಳಿದ್ದಾರೆ?

೪. ಜಾತಿಯ ವಿಷವೃಕ್ಷ ತೆಗೆಯುವುದಕ್ಕೆ ಕವಿಯ ಸಲಹೆ ಏನು?

೫. ಈ ಪದ್ಯದ ಎರಡನೆಯ ನುಡಿಯ ಭಾವಾರ್ಥವನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ.

**ಇ. ಈ ಕೆಳಗಿನ ವಾಕ್ಯಗಳಲ್ಲಿ ಬಿಟ್ಟು ಹೋಗಿರುವ ಪದಗಳನ್ನು ಸೂಕ್ತ ಪದಗಳಿಂದ ಭರ್ತಿಮಾಡಿರಿ.**

೧. ಪ್ರೇಮದ ____________ ಮಾಡಿ

೨. ತಾಳ್ಮೆಯ ____________ ಹಾಕಿ

೩. ಸಮಾನತೆಯ ____________ ಬಿಟ್ಟು

೪. ಜಾತಿಯ ____________ ವೃಕ್ಷವನ್ನು

೫. ಅಹಿಂಸೆಯ ____________ ಮಾನವತೆಯ ಸಾರುವ



**ಉ. ಈ ಕೆಳಗಿನ ಪದಗಳಿಗೆ ಸಮಾನಾರ್ಥಕ ಪದಗಳನ್ನು ನಿಘಂಟಿನಿಂದ ಸಂಗ್ರಹಿಸಿ ಬರೆಯಿರಿ.**

ನೀತಿ, ದ್ವೇಷ, ಅಸೂಯೆ, ತಾಳ್ಮೆ, ತೇಲು.

**ಎ. ಈ ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.**

ಅಸಮಾನತೆ, ಅಜ್ಞಾನ, ಹಿಂಸೆ, ನೀತಿ

**ಏ. ತತ್ಸಮ-ತದ್ಭವ ಬರೆಯಿರಿ.**

ಸಂತೆ, ದ್ವೇಷ, ರಕ್ತ.

## ಪ್ರಾಯೋಗಿಕ ಚಟುವಟಿಕೆ

ಅ. ಈ ಕೆಳಗಿನ ಪದಗಳ ಉಚ್ಚಾರಣೆಯನ್ನು ಗುರುಗಳಿಂದ ಕೇಳಿ ತಿಳಿದು ನೀವೂ ಉಚ್ಚರಿಸಿ, ಹಾಗೆಯೇ ತಪ್ಪಿಲ್ಲದಂತೆ ಬರೆಯಿರಿ.

ದ್ವೇಷಾಸೂಯೆ, ತಾಳ್ಮೆ, ಅಜ್ಞಾನ, ಮೌಢ್ಯ, ವಾತ್ಸಲ್ಯ

ಆ. ಸಮಾಜದಲ್ಲಿ ಕಂಡುಬರುವ ಮೇಲು-ಕೀಳು, ಬಡವ-ಬಲ್ಲಿದ ಎಂಬ ಅಸಮಾನತೆಯ ಕುರಿತು ಮಿತ್ರರ ಜೊತೆಗೆ ಅಭಿಪ್ರಾಯ ಹಂಚಿಕೊಳ್ಳಿರಿ.

ಇ. ಈ ಪದ್ಯದ ಮೊದಲ ನುಡಿಯನ್ನು ಕಂಠಪಾಠ ಮಾಡಿರಿ.

ಈ. ಸಮಾನತೆಯ ಸಂದೇಶ ಸಾರುವ ಬಸವಣ್ಣನವರ ವಚನಗಳನ್ನು ಸಂಗ್ರಹಿಸಿ ಓದಿರಿ.

## ಪೂರಕ ಓದು

### ನಾನೊಂದು ಮರವಾಗಿದ್ದರೆ

ನಾನೊಂದು ಮರವಾಗಿದ್ದರೆ
ಹಕ್ಕಿ ಗೂಡು ಕಟ್ಟುವ ಮುನ್ನ
ಕೇಳುತ್ತಿರಲಿಲ್ಲ ನೀನು ಯಾವ ಕುಲ
ಬಿಸಿಲು ನನ್ನ ಅಪ್ಪಿಕೊಂಡಾಗ
ನೆರಳಿಗಾಗುತ್ತಿರಲಿಲ್ಲ ಮೈಲಿಗೆ.
ತಂಬೆಲರ ಕೂಡ ಎಲೆಗಳ ಸ್ನೇಹ
ಮಧುರವಾಗಿರುತ್ತಿತ್ತು

ಮಳೆ ಹನಿಗಳು ನಾನು ಶ್ವಪಚನೆಂದು
ಹಿಂದೆ ಸರಿಯುತ್ತಿರಲಿಲ್ಲ ನಾನು
ಬೇರೂರಿ ಕುಡಿಯಿಡುತ್ತಿರುವಾಗ ಭೂದೇವಿ
ಮಡಿಮಡಿ ಎಂದು ಓಡುತ್ತಿರಲಿಲ್ಲ
ಪವಿತ್ರ ಗೋವು ನನ್ನ ತೊಗಟೆಗೆ ತನ್ನ ಮೈ ಉಜ್ಜಿ
ತುರಿಕೆ ತೀರಿಸಿಕೊಳ್ಳುವಾಗ ಅದರ ಅಂಗಾಂಗಗಳಲ್ಲಿ
ಅಡರಿಕೊಂಡ ಮುಕ್ಕೋಟಿ ದೇವತೆಗಳು
ನನ್ನನ್ನು ಮುಟ್ಟಿಸಿಕೊಳ್ಳುತ್ತಿದ್ದರು.

ಯಾರಿಗೆ ಗೊತ್ತು
ನನ್ನ ಅಂತ್ಯ ಕಾಲದಲ್ಲಿ ಕಡಿದು ತುಂಡಾದ ಒಣ ಸೀಳೊಂದು
ಹೋಮಾಗ್ನಿಯಲ್ಲಿ ಬೆಂದು
ಪಾವನವಾಗುತ್ತಿತ್ತೇನೊ
ಅಥವಾ
ಸತ್ಪುರುಷನೊಬ್ಬನ ಹೆಣಕ್ಕೆ ಚಟ್ಟವಾಗಿ
ನಾಲ್ಕು ಜನ ಸಜ್ಜನರ ಹೆಗಲೇರಬಹುದಿತ್ತೇ.

-ಮೂಡ್ನಾಕೂಡು ಚಿನ್ನಸ್ವಾಮಿ



**ನಡೆವುದೊಂದೇ ಭೂಮಿ, ಕುಡಿವುದೊಂದೇ ನೀರು**
**ಸುಡುವಗ್ನಿಯೊಂದೇ ಇರಲು ಕುಲಗೋತ್ರ ನಡುವೆ ಎತ್ತಣದು ಸರ್ವಜ್ಞ**

* * *

ಗದ್ಯಪಾಠ

# ೧೨. ನನ್ನ ಟೋಪಿ

–ಬಿ. ಜಿ. ಎಲ್. ಸ್ವಾಮಿ

**ಆಶಯ :** ಪ್ರಪಂಚದ ಯಾವಭಾಗಕ್ಕೆ ಹೋದರೂ ಮನುಷ್ಯ ಸ್ವಭಾವ ಒಂದೇ. ಲೇಖಕರಾದ ಬಿ.ಜಿ.ಎಲ್.ಸ್ವಾಮಿಯವರು ಅಮೆರಿಕಾ ದೇಶಕ್ಕೆ ಭೇಟಿ ಕೊಟ್ಟಾಗ ತಮಗಾದ ಅನುಭವಗಳನ್ನು ಹಾಸ್ಯಪೂರ್ಣವಾಗಿ ತಿಳಿಸಿದ್ದಾರೆ. ಅವರ ಟೋಪಿಯ ಒಂದು ಸ್ವಾರಸ್ಯಕರ ಪ್ರಸಂಗವಿದು.





ಮೊದಲನೆ ವರ್ಷದ ಹುಟ್ಟಿದ ಹಬ್ಬಕ್ಕೆ ತಲೆಗೊಂದು ಸೂರು; ಚೌಲಕ್ಕೆ ತಲೆಗೊಂದು ಸೂರು; ಮುಂಜಿಯಲ್ಲಿ ತಲೆಗೊಂದು ಸೂರು; ಕ್ಲಾಸಿಗೆ ಹೋಗುವಾಗ ತಲೆಗೊಂದು ಸೂರು; ಕಚೇರಿಗೆ ಹೋಗುವಾಗ ತಲೆಗೊಂದು ಸೂರು; ಮದುವೆಯಾಗುವಾಗ ತಲೆಗೊಂದು ಸೂರು; ಚಿಕ್ಕವರು ದೊಡ್ಡವರನ್ನು ನೋಡಲು ಹೋದಾಗ ತಲೆಗೊಂದು ಸೂರು; ದೊಡ್ಡವರು ಒಬ್ಬರನ್ನೊಬ್ಬರು ಕಾಣಲು ಹೋದಾಗ ತಲೆಗೊಂದು ಸೂರು; ಶುಭ ಕಾರ್ಯಗಳಲ್ಲಿ ಭಾಗವಹಿಸುವಾಗ ತಲೆಗೊಂದು ಸೂರು. ಹೀಗಾಗಿ ಹುಟ್ಟಿದಾರಭ್ಯ ನಮ್ಮ ಪಾಲಿಗೆ ತಲೆ ತೊಡುಗೆ ಅಂಟಿಕೊಂಡುಬಿಟ್ಟಿದೆ. ಸೂರಿನ ರೂಪ ತಲೆತಲಾಂತರದಿಂದಲೂ ಎಷ್ಟು ಮಾರ್ಪಾಟು ಹೊಂದಿದ್ದರೂ, ಸಂಪ್ರದಾಯ ಉಳಿದುಕೊಂಡೇ ಬಂದಿದೆ. ತಲೆ ತೊಡುಗೆಯ ನಂಟು ಹಿಂದೂ ಜನಾಂಗಕ್ಕೆ ಮಾತ್ರ ಸೇರಿದ್ದಲ್ಲ. ಪ್ರಪಂಚದ ನೂರಾರು ಸಂಸ್ಕೃತಿಗಳ ಚರಿತ್ರೆಯಲ್ಲೂ ಇದರ ಪ್ರಭಾವ ಕಂಡುಬಂದೇ ಬರುತ್ತದೆ. ಯಾವ ನಾಗರಿಕ ಜನಾಂಗವನ್ನು ನೋಡಿದರೂ ಅವರದೇ ಒಂದು ಮಾದರಿಯ ತಲೆ ತೊಡುಗೆ ಇದ್ದೇ ಇರುತ್ತದೆ. ಅದನ್ನು ಧರಿಸುವ ರೀತಿ ನೀತಿಗಳಿಗೆ ಅವರವರದೇ ಆದ ಸಂಪ್ರದಾಯಗಳೂ ಇವೆ.

ನಮ್ಮಲ್ಲಿ ಗುಡಿಗೆ ಹೋದೊಡನೆಯೇ ತಲೆಯ ಮೇಲಿನ ತೊಡುಗೆಯನ್ನು ತೆಗೆಯುವ ಪದ್ಧತಿ ಕೆಲವರಲ್ಲುಂಟು. ಅಮೆರಿಕನ್ನರು ಚರ್ಚಿಗೆ ಹೋದಾಗ ಗಂಡಸರು ಮಾತ್ರ ತೆಗೆಯುತ್ತಾರೆ. ಆದರೆ ಹೆಂಗಸರು ಹ್ಯಾಟು ಧರಿಸದೆ ಚರ್ಚಿಗೆ ಹೋಗಿ ಪ್ರಾರ್ಥನೆಯಲ್ಲಿ ಭಾಗವಹಿಸುವುದು ಅವಮರ್ಯಾದೆ. ನಮ್ಮಲ್ಲಿ ಹಿರಿಯರನ್ನು

ಕಾಣಲು ಹೋದಾಗ– ಬೀದಿಯಲ್ಲೆಲ್ಲ ಬರಿತಲೆಯಲ್ಲಿ ಓಡಾಡಿದರೂ ಅವರೆದುರಿಗೆ ಹೋಗುವ ಮುನ್ನ ಕಿಸೆಯಲ್ಲಿ ಸೆಕ್ಕಿಕೊಂಡಿರುವ ಟೋಪಿಯನ್ನು ಧರಿಸಿಕೊಂಡು ನಮ್ರತೆಯಿಂದ ನಮಸ್ಕರಿಸಬೇಕು. ಇದು ನಮ್ಮ ಸಂಪ್ರದಾಯಕ್ಕನುಗುಣವಾದ ಮರ್ಯಾದೆ. ಅವರಲ್ಲಿ, ಧರಿಸಿಕೊಂಡಿದ್ದ ಹ್ಯಾಟನ್ನು ದೊಡ್ಡವರ ಸನ್ನಿಧಾನದಲ್ಲಿ ತಲೆಯ ಮೇಲಿಂದ ತೆಗೆದು ಬಗ್ಗಿ ವಂದಿಸಬೇಕು. ಇದು ಅವರ ಸಂಪ್ರದಾಯಕ್ಕನುಗುಣವಾದ ಮರ್ಯಾದೆ. ಮನೆ, ಕಟ್ಟಡ ಮೊದಲಾದವುಗಳ ಒಳಕ್ಕೆ ಹೋದಾಗ ನಮ್ಮಲ್ಲಿ ತಲೆತೊಡುಗೆಯನ್ನೇನು ತೆಗೆಯಬೇಕಾಗಿಲ್ಲ. ಆದರೆ ಅವರಲ್ಲಿ ಈ ನಡತೆ ತುಂಬ ಅಪೇಕ್ಷಣೀಯ. ಮನೆಯೊಳಕ್ಕೆ ಪ್ರವೇಶಿಸಿದಾಗ ಹ್ಯಾಟನ್ನು ತೆಗೆಯುವುದು ನಾಗರಿಕ ಲಕ್ಷಣ.

ನನಗೆ ಹ್ಯಾಟು ಹಾಕಿಕೊಳ್ಳುವುದಕ್ಕೆ ತುಂಬ ಬೇಸರ. ತಲೆಯ ಮೇಲೆ ಭಾರವಾದ ಮಕ್ಕರಿಯೊಂದನ್ನು ಬೋರಲು ಹಾಕಿಕೊಂಡಂತೆ ಅನುಭವವಾಗುತ್ತದೆ. ಮಳೆಯಲ್ಲಿ ನೆನೆದರಂತೂ ಈ ಭಾರ ಇನ್ನೂ ಹೆಚ್ಚಾಗುತ್ತದೆ. ಹ್ಯಾಟನ್ನು ಜೋಪಾನವಾಗಿಟ್ಟುಕೊಳ್ಳುವುದಕ್ಕೆ ಇನ್ನಷ್ಟು ಶ್ರಮ. ನಾನು ಇಂಡಿಯಾ ಬಿಡುವುದಕ್ಕೆ ಮುಂಚೆಯೇ ಪರದೇಶಗಳಿಂದ ಹಿಂದಿರುಗಿದ್ದ ಗೆಳೆಯರು 'ಹ್ಯಾಟಿಲ್ಲದೆ ಪರದೇಶ ಪ್ರಯಾಣ ಮಾಡುವುದುಂಟೆ? ನಿನ್ನ ಸೂಟಿಗೊಂದು ಗಾಂಭೀರ್ಯ ಕೊಡುತ್ತದೆ. ಅದಿದ್ದೇ ಇರಬೇಕು' ಎಂದು ಮಾಡಿದ್ದ ಉಪದೇಶ; 'ತಲೆಗೊಂದು ಸೂರಿಲ್ಲದೆ ಮನೆಯಿಂದ ಹೊರಕ್ಕೆ ತಲೆಯಿಡುವುದೇ ಅವಮರ್ಯಾದೆ; ಇನ್ನು ಹಾಗೆಯೇ ದೇಶದಿಂದ ಆಚೆ ಹೋಗುವುದು ಪೋಕರಿತನದ ಪರಮಾವಧಿ' ಎಂಬ ನನ್ನ ಮನೆಯವರ ವಾದ; ಈ ಎರಡೂ ದವಡೆಗಳ ಮಧ್ಯೆ ಸಿಕ್ಕಿಕೊಂಡ ನಾನು ಆರಿಸಿಕೊಂಡ ಟೋಪಿ ಕಾಶ್ಮೀರದ ಕಲೆಗಾರಿಕೆಯ ಶೈಲಿಯದು. ನಮ್ಮಲ್ಲನೇಕರ ತಲೆಯ ಮೇಲೆ ಸಾಮಾನ್ಯವಾಗಿ ಕುಳಿತಿರುವ ರಟ್ಟು ರಟ್ಟಾದ ಮಡಿಚುವ ತೆರದ್ದರಿಂದ ಇದರ ಮಾಟ ಬೇರೆಯದ್ದಲ್ಲ. ಆದರೆ ಇದಕ್ಕೆ ಉಪಯೋಗಿಸುವ ಬಟ್ಟೆ ಶಾಲು ತೆರದ್ದು. ಅದರಮೇಲೆ ಕಸೂತಿಯಿದೆ– ಕಾಶ್ಮೀರದ ಶಾಲುಗಳ ಅಂಚಿನಲ್ಲಿರುವಂತೆ. ಇದ್ದದ್ದರಲ್ಲಿ ತಕ್ಕಮಟ್ಟಿಗೆ ಕಲಾಕುಶಲತೆಯ ಕಸೂತಿಯಿದ್ದ ಟೋಪಿಯನ್ನೇ ಆರಿಸಿಕೊಂಡೆ.

ಉತ್ತರ ಅಮೇರಿಕದ ಪೂರ್ವ ತೀರದಲ್ಲಿರುವ ಮುಖ್ಯ ಪಟ್ಟಣಗಳಲ್ಲಿ ಬಾಸ್ಟನ್ ಒಂದು. ಇದರಲ್ಲಿ ಕೇಂಬ್ರಿಡ್ಜ್ ಎಂಬುದೊಂದು ಹರವು. ಈ ಹರವಿನಲ್ಲಿಯೆ ಹಾರ್‌ವರ್ಡ್ ವಿದ್ಯಾಪೀಠ. ನಾನು ಕೆಲಸ ಮಾಡುತ್ತಿದ್ದುದು ಇಲ್ಲಿ. ಕಾಲೇಜಿನಿಂದ ನಾನು ವಾಸಿಸುತ್ತಿದ್ದ ಮನೆಗೆ ಹತ್ತು ನಿಮಿಷದ ನಡಿಗೆ. ನನ್ನ ಮನೆ ಎದುರು ಬಸ್ಸು ನಿಲ್ಲುವ ಜಾಗ. ಅದರ ಪಕ್ಕದಲ್ಲಿ ಶ್ರೀಮಂತರಿಗೆ ಸೇರಿದುದೆಂದು ಹೇಳಬಹುದಾದ ಮನೆ. ಪ್ರತಿದಿನ ಬೆಳಿಗ್ಗೆ ಹನ್ನೊಂದು ಗಂಟೆ ಸುಮಾರಿಗೆ ಮನೆ ಎದುರಿನ ಬಸ್ ಸ್ಟಾಪಿಗೆ ಬಂದು, ಕಾಲೇಜು ಬಸ್ಸಿಗಾಗಿ ಕಾಯುತ್ತಿದ್ದೆ. ಅಷ್ಟು ಹೊತ್ತಿಗೆ ಸರಿಯಾಗಿ ಎದುರು ಮನೆಯಿಂದ ಅರವತ್ತು ವರ್ಷದ ಮುದುಕಿಯೊಬ್ಬಳೂ, ಇಪ್ಪತ್ತೈದು ವರ್ಷದ ಹುಡುಗಿಯೊಬ್ಬಳೂ ಹೊರಬಂದು ಬಸ್ಸಿಗಾಗಿ ಕಾಯುತ್ತಿದ್ದರು. ಈ ಕಾರ್ಯಕ್ರಮ ಮೂರು ನಾಲ್ಕು ತಿಂಗಳಿಂದಲೂ ತಪ್ಪದೆ ನಡೆದು ಬರುತ್ತಿದ್ದುದರಿಂದ ಅವರಿಬ್ಬರ ಮತ್ತು ನನ್ನ ಪರಸ್ಪರ ಮುಖ ಪರಿಚಯಯ ಸಾಕಾದಷ್ಟು ಬೆಳೆದಿತ್ತು. ಮತ್ತು ಹಾರ್‌ವರ್ಡ್ ವಿದ್ಯಾಪೀಠದಲ್ಲಿಯೇ ಅವರಿಗೂ ಕೆಲಸ. ಮುದುಕಿ ನನ್ನ ಲ್ಯಾಬೊರೆಟರಿಯ ಪಕ್ಕದಲ್ಲಿದ್ದ ಕಾಲೇಜು ಸಂಸ್ಥೆಯೊಂದರಲ್ಲಿ ಖಜಾಂಚಿ. ಮಗಳು ಅದೇ ವಿದ್ಯಾಪೀಠದ ಬೇರೊಂದು ಶಾಖೆಯಲ್ಲಿ ವಿದ್ಯಾರ್ಥಿನಿ. ಆ ದಿನ ನನ್ನ ಹಿರಿಯ ಗೆಳೆಯರೊಬ್ಬರ ಮನೆಯಲ್ಲಿ ಔತಣಕೂಟ. ಟೋಪಿ ಹಾಕಿಕೊಂಡು ಬಸ್ ಸ್ಟಾಪಿಗೆ ಬಂದೆ. ಯಥಾಪ್ರಕಾರ ಮುದುಕಿ ಹುಡುಗಿಯರ ಭೇಟಿಯಾಯ್ತು. ನನ್ನನ್ನು ನೋಡಿ ತಮ್ಮತಮ್ಮೊಳಗೆ ಗುಸುಗುಸು ಮಾತು ಪ್ರಾರಂಭಿಸಿದರು. ಮಧ್ಯೆ ಮಧ್ಯೆ ನನ್ನ ಟೋಪಿ ಕಡೆ

ದೃಷ್ಟಿ ವಿಸ್ತರಿಸುತ್ತಿದ್ದರು. ಇದು ಸುಮಾರು ಹತ್ತು ನಿಮಿಷ ನಡೆಯಿತು. ಬಸ್ಸು ಬಂತು. ಅದರಲ್ಲಿ ಖಾಲಿಯಿದ್ದುದು ಎರಡು ಸೀಟು. ಇವರಿಬ್ಬರೂ ಹತ್ತಬಹುದಾಗಿತ್ತು. ಆದರೆ ಅವರು ಮಾತಿನಲ್ಲಿ ತಲ್ಲೀನರಾಗಿ ಕೈಬಾಯಿಗಳನ್ನು ತಿರುಗಿಸುತ್ತ ಹೊರ ಪ್ರಪಂಚದಿಂದ ವಿಮುಖರಾಗಿದ್ದರು. ನಾನು ನನ್ನ ಗೆಳೆಯನೊಬ್ಬನಿಗೆ ಕಾಯಬೇಕಾಗಿದ್ದುದರಿಂದ ಅಲ್ಲಿಯೆ ನಿಂತೆ. ಬಸ್ಸು ಹೊರಟುಹೋಯಿತು. ನಾವು ಮೂವರು ಉಳಿದೆವು.

ಮುದುಕಿ ಮೊದಲು ಒಂದು ಹೆಜ್ಜೆ ಮುಂದೆ ಬಂದಳು. ಅನಂತರ ಮಗಳು, ತಾಯಿಯ ಬಾಲದಂತೆ. ಇಬ್ಬರೂ ಗಂಟಲು ಸರಿಮಾಡಿಕೊಂಡು ಕೆಮ್ಮಿದರು. ಪ್ರಾರಂಭವಾಯಿತು.

'ಒಂದೆರಡು ನಿಮಿಷ ಪುರುಸೊತ್ತಿದೆಯೆ?'

'ಏನಾಗಬೇಕು?' ಎಂದೆ

'ನಿಮ್ಮನ್ನು ಒಂದು ವಿಷಯ ಕೇಳಬೇಕೆಂದು. . .' ಎಂದಳು ಮುದುಕಿ.

'ದಯವಿಟ್ಟು ಕೇಳಿ.'

'ನಿಮ್ಮ ತಲೆಯ ಮೇಲಿರುವುದು ಏನು?'

'ನೀವು ಹ್ಯಾಟು ಹಾಕಿಕೊಳ್ಳುವುದಿಲ್ಲವೆ! ಅದರಂತೆಯೇ ಇದೂ. ಟೋಪಿ ನಮ್ಮ ದೇಶದ ತಲೆಯುಡುಗೆಗಳಲ್ಲಿ ಒಂದು'

'ಅದೆಷ್ಟು ಚೆಲುವಾಗಿದೆ! ಎಂದು ಕಣ್ಣುಬಾಯಿ ಬಿಟ್ಟು ಟೋಪಿಯನ್ನೇ ದಿಟ್ಟಿಸುತ್ತ ನಿಂತುಕೊಂಡರು. ಎರಡು ನಿಮಿಷ ಮೂವರೂ ಮೌನ. ಅನಂತರ–

'ಅದು ನಿಮ್ಮದೆ?'

'ಹೌದು!'

'ಇದಲ್ಲದೆ ಬೇರೆ ಇದೆಯೆ?'

'ಇಲ್ಲವಲ್ಲಾ!'

ಒಬ್ಬರ ಮುಖವನ್ನೊಬ್ಬರು ನೋಡಿಕೊಂಡು ಅದೇನೋ ಲೊಚಗುಟ್ಟಿಕೊಂಡರು. ಪುನಃ–

'ಇದೇ ತೆರನಾದ್ದು ಬೇರಾವುದೂ ಇಲ್ಲವೇ?'

'ನೀವು ಟೋಪಿಯನ್ನು ಉದ್ದೇಶಿಸಿರುವಿರಾದರೆ ಇಲ್ಲವೆಂದು ಹೇಳಬೇಕಾಗುತ್ತದೆಯಲ್ಲ!'

'ನೀವು ಇದನ್ನು ಯಾವಾಗಲೂ ಹಾಕಿಕೊಳ್ಳುವಿರಾ?'

'ಯಾವಾಗಲೂ ಎಂದರೆ ಗಾಳಿಯಲ್ಲಿ ಸಂಚರಿಸುವಾಗ, ಮತ್ತು ಯಾವುದಾದರೂ ಪಾರ್ಟಿಗಳಿಗೆ ಹೋಗುವಾಗ ಹಾಕಿಕೊಳ್ಳುತ್ತೇನೆ'

'ಸಂಜೆ ಹೊತ್ತು?'

'ಅನಾವಶ್ಯಕವಾಗಿ ಹಾಕಿಕೊಳ್ಳುವುದಿಲ್ಲ.'

'ನೋಡಿ. . .'(ಹುಡುಗಿಯ ಕಡೆತೋರಿಸುತ್ತಾ), 'ಇವಳು ಡೋರಿ, ನನ್ನ ಮಗಳು. . .'

‘ಬಹಳ ಸಂತೋಷ’ ಎಂದು ಡೋರಿಯೊಡನೆ ಕೈಕುಲುಕಿದ್ದಾಯಿತು.

ಮುದುಕಿ: ‘ನಿಮ್ಮ ಟೋಪಿ ಬಹಳ ಅಪರೂಪದ ವಸ್ತು.’

ಡೋರಿ: ‘ತೀರ ಚೆಲುವಿನದೂ ಅಹುದು’

ನಾನು: ‘ ಒಂದು ದೇಶದಲ್ಲಿ ಮಾತ್ರ ರೂಢಿಯಲ್ಲಿರುವುದು ಇನ್ನೊಂದು ದೇಶದಲ್ಲಿ ಹಾಗೆ ತಾನೆ ಆಗಬೇಕು!’ ಮುದುಕಿ ಮತ್ತು ಡೋರಿ: ‘ಅದರ ಸೌಂದರ್ಯಕ್ಕೆ ನಿಜವಾಗಿಯೂ ಮನಸೋತಿದ್ದೇವೆ.’ ಬಳಸು ಬಳಸಾದ ಇಷ್ಟು ಪೀಠಿಕಾ ಪ್ರಕರಣವಾದ ಮೇಲೆ ಮುದುಕಿ ಪಾಯಿಂಟಿಗೆ ಬಂದಳು.– ‘ನೋಡಿ, ನಾಳೆ ಸಂಜೆ ಡೋರಿ ಕಾಲೇಜಿನಲ್ಲಿ ಒಂದು ಪಾರ್ಟಿ ಇದೆ. ಒಳ್ಳೆಯ ಬಟ್ಟೆ ಬರೆ.

ಹಾಕಿಕೊಂಡು ಹೋಗಬೇಕಾಗಿದೆ. ಇದಕ್ಕೋಸ್ಕರವಾಗಿಯೇ ನೋಡಿ ಈ ಗೌನನ್ನು ತೆಗೆದುಕೊಂಡಿದ್ದೇವೆ.’ ಎನ್ನುತ್ತ ಕೈಲಿದ್ದ ಕಟ್ಟನ್ನು ಬಿಚ್ಚಿ ಈವಿನಿಂಗ್ ಗೌನ್ ಅನ್ನು ತೋರಿಸಿದಳು. ಆಗತಾನೆ ಪರಿಚಿತವಾದ ನನಗೆ ಡೋರಿಯ ಗೌನನ್ನು ತೋರಿಸುವುದರ ಅರ್ಥವೇನಿರಬಹುದೆಂದು ದಿಗಿಲಾಯಿತು.

ಮುದುಕಿ: ‘ ನೋಡಿ ಈ ಗೌನು ಊದಾ ಬಣ್ಣ.’

ನಾನು: ‘ಹೌದು, ಬಹಳ ಅಂದವಾಗಿದೆ’

ಡೋರಿ: ‘ನಿಮ್ಮ ಟೋಪಿಯೂ ಊದಾಬಣ್ಣ’ ಅದಕ್ಕೂ ಇದಕ್ಕೂ ಸಂಬಂಧವೇನಿರಬಹುದೆಂದು ತಲೆ ಕೆರೆದುಕೊಂಡೆ.

ನಾನು;(ಸಂಶಯದಿಂದ) ‘ಹೌದು. . .’

ಮುದುಕಿ: ‘ಡೋರಿಯ ಹತ್ತಿರ ಈ ಗವನಿಗೊಪ್ಪುವ ತಲೆಯುಡುಗೆಯಿಲ್ಲ. ಆದ್ದರಿಂದ ನಾಳೆ ಸಂಜೆಗೆ ಮಾತ್ರ ನಿಮ್ಮ ಟೋಪಿಯನ್ನು ನಮ್ಮ ಡೋರಿಗೆ ಎರವಲು ಕೊಡುವಿರಾದರೆ ನಾವಿಬ್ಬರೂ ತುಂಬ ಕೃತಜ್ಞರಾಗಿರುತ್ತೇವೆ.’ನನಗೆ ವಿಶದವಾಗಲಿಲ್ಲ. ಕೇಳಿದೆ, ಎಂದರೆ ನನ್ನ ಟೋಪಿಯನ್ನು ನಿಮ್ಮ ಡೋರಿ ನಾಳೆ ಸಂಜೆಯ ಪಾರ್ಟಿಗೆ ಹಾಕಿಕೊಂಡು ಹೋಗುವುದೆಂದೆ?

ಇಬ್ಬರೂ: ‘ಹೌದು, ಹೌದು.’ ನಿಜವಾಗಿಯೂ ನಾನು ಅವಾಕ್ಕಾದೆ. ಅದೇನೋ ಷಾಕ್ ಬಡಿದಂತಾಯಿತು. ಎರಡು ನಿಮಿಷವಾದರೂ ಬಾಯಿಂದ ಮಾತೇ ಹೊರಡದು. ಡೋರಿ ಕೇಳಿದಳು, ‘ನಾವು ನಿಮಗೆ ಕಿರಿಕಿರಿ ಕೊಡುತ್ತಿದ್ದೇವೆಯೆ?’

ನಾನು: ‘ಇಲ್ಲ ಇಲ್ಲ, ಖಂಡಿತ ಇಲ್ಲ’ ‘ನೋಡಿ ನಮ್ಮಲ್ಲಿ ಹೆಂಗಸರಾರೂ ತಲೆ ತೊಡುಗೆ ಇಟ್ಟುಕೊಳ್ಳುವುದಿಲ್ಲ. ತಲೆಗೊಂದು ಸೂರು ಎನ್ನುವುದು ಗಂಡಸರನ್ನು ಮಾತ್ರ ಕುರಿತದ್ದು. ನೀವು ಈ ಟೋಪಿಯನ್ನು ಬಳಸಿದರೆ ಜನ ನಗುವುದಿಲ್ಲವೆ?’ ಎಂದೆ.

ಡೋರಿ:– ನಕ್ಕರೆ ಅದು ಅವರ ಹುಚ್ಚುತನವನ್ನು ತೋರಿಸುತ್ತದೆ, ಅಷ್ಟೆ!’

ಮುದುಕಿ–‘ಜನ ನಗುತ್ತಾರೆಂದು ನಾವು ಸುಂದರ ವಸ್ತುವನ್ನು ತೊಡದಿರುವುದಕ್ಕಾಗುತ್ತದೆಯೆ? ನಮ್ಮ ಡೋರಿ ರೂಪವಂತೆ. ಅವಳ ಈ ಗೌನು ಸೊಬಗಿನ ಗಟ್ಟಿ. ಅದರೊಡನೆ ಈ ಟೋಪಿ ಸೇರಿದರೆ ! ಎಂದು ಗಾಳಿಯಲ್ಲಿ ತೇಲಾಡಲು ಮೊದಲಿಟ್ಟಳು. ಡೋರಿಯಂತೂ ಆನಂದಪರವಶಳಾದಂತೆ ಅಭಿನಯಿಸಿದಳು.

'ಈ ಟೋಪಿಯನ್ನು ಧರಿಸಿ ನಾನು ಪಾರ್ಟಿಗೆ ಹೋದೆನಾದರೆ ಅಲ್ಲಿನ ಕಣ್ಣುಗಳೆಲ್ಲವೂ ನನ್ನ ಮೇಲೆಯೆ. ಜನ ನಗುವುದಿಲ್ಲ. ಈ ಅಪರೂಪ ಸೌಂದರ್ಯಕ್ಕೆ ಮನಸೋತು, ತಮ್ಮ ಹತ್ತಿರ ಇಲ್ಲವಲ್ಲಾ ಎಂದು ಅಸೂಯೆ ಪಟ್ಟುಕೊಳ್ಳುತ್ತಾರೆ?' ಎಂದಳು ಡೋರಿ.

ತಾಯಿ–ಮಗಳ ವಾದಕ್ಕೆ ನಾನು ಸೋತೆ. ಪಾರ್ಟಿಯಾದ ಮೂರು ದಿನಗಳಾದ ಮೇಲೆ ನನಗೆ ಡೋರಿಯ ಮನೆಯಿಂದ ಕರೆಬಂತು, ಅವರ ಮನೆಗೆ ಬಂದು ಟೋಪಿಯನ್ನು ವಾಪಸು ತೆಗೆದುಕೊಳ್ಳಬೇಕೆಂದು. ಹೋದಾಗ ಬಾಗಿಲು ತೆರೆದವರು ನನಗೆ ಲ್ಯಾಬೊರೆಟರಿಯಲ್ಲಿ ಪಾಠ ಹೇಳುತ್ತಿದ್ದ ಪ್ರೊಫೆಸರುಗಳಲ್ಲಿ ಒಬ್ಬರು! ಅವರ ಹಿಂದೆ ನನಗೆ ಪರಿಚಿತಳಾಗಿದ್ದ ಮುದುಕಿ, ಅವಳ ಹಿಂದೆ ಡೋರಿ! ಪ್ರೊಫೆಸರು ಒಳಕ್ಕೆ ಸ್ವಾಗತಿಸಿ ಮುದುಕಿಯನ್ನು 'ನನ್ನ ಹೆಂಡತಿ' ಎಂದೂ ಡೋರಿಯನ್ನು 'ನನ್ನ ಮಗಳು' ಎಂದೂ ಪರಿಚಯಿಸಿದರು! ನನ್ನ ಮೈ ಬೆವರಿತು.

ಟೀ ಕುಡಿಯುತ್ತ ಸಾಂಪ್ರದಾಯಿಕವಾದ ಕುಶಲ ಸಂಭಾಷಣೆಗಳಾದ ಮೇಲೆ ಡೋರಿ ನನ್ನ ಕೈಗೊಂದು ನ್ಯೂಸ್ ಪೇಪರಿನ ಕಟಿಂಗ್ ಕೊಟ್ಟಳು. ಅದರ ಒಕ್ಕಣೆ ಹೀಗಿತ್ತು." ಲಿಬರಲ್ ಆರ್ಟ್ಸ್ ಯೂನಿಯನ್ನಿನ ಆಶ್ರಯದಲ್ಲಿ ನಡೆದ ಪಾರ್ಟಿಯಲ್ಲಿ ಡೋರಿ ತೊಟ್ಟುಕೊಂಡಿದ್ದ ಟೋಪಿ ಆಹ್ವಾನಿತರನ್ನೆಲ್ಲ ಬೆರಗುಗೊಳಿಸಿತು. ಅದರ ನವೀನತೆಯೂ, ಸೊಬಗೂ, ಚಾತುರ್ಯವೂ ಎಲ್ಲರನ್ನೂ ಮೆಚ್ಚಿಸಿತು. ನಮ್ಮಲ್ಲಿರುವ ಉಡುಪು ತಯಾರಿಕೆಯ ಕಲೆಗಾರರು ಈ ಟೋಪಿಯನ್ನು ಪರೀಕ್ಷಿಸುವುದು ಭವಿಷ್ಯದ ಫ್ಯಾಷನ್ ದೃಷ್ಟಿಯಿಂದ ಅವಶ್ಯಕವಾಗಿದೆ."

ಮಗಳು, ತಂದೆ, ತಾಯಿಗಳಿಗೆ ಹಿಗ್ಗೋ ಹಿಗ್ಗು. ಏನೋ ಮಹತ್ಕಾರ್ಯವನ್ನು ಸಾಧಿಸಿದಷ್ಟು ಹೆಮ್ಮೆ, ಸಂತೋಷ. ಕಳೆದ ಮೂರು ದಿನಗಳಿಂದ ಅವರ ಮನೆಗೆ ತಂಡ ತಂಡವಾಗಿ ಜನರು– ಡೋರಿಯ ಗೆಳತಿಯರು ಮತ್ತು ಪಾರ್ಟಿಯ ವಿಷಯವನ್ನು ಪೇಪರುಗಳಲ್ಲಿ ಓದಿದವರು– ಟೋಪಿಯನ್ನು ಪರೀಕ್ಷಿಸಿ ತಮಗೂ ಅಂತಹದೊಂದು ಬೇಕೆಂದು ಕೇಳುತ್ತಿರುವರೆಂದೂ, ಪ್ರತಿ ದಿನವೂ ಹತ್ತಾರು ಜನ ಫೋನಿನಲ್ಲಿ ಇದೇ ವಿಷಯ ಪ್ರಸ್ತಾಪ ಮಾಡುತ್ತಿದ್ದಾರೆಂದೂ ಒಬ್ಬೊಬ್ಬರೂ ಬಿಡಿಸಿ ಬಿಡಿಸಿ, ತಿರುಗಿಸಿ ತಿರುಗಿಸಿ, ಉಪಮಾನ, ಉಪಮೇಯ, ಉದಾಹರಣೆಗಳೊಂದಿಗೆ ಹೇಳಿದರು. ನನಗೇನು ಪ್ರತ್ಯುತ್ತರವನ್ನು ಹೇಳಲು ತೋರಲಿಲ್ಲ. "ಇದೇನು ಆಭಾಸ! ಹುಚ್ಚರನ್ನು ಕಂಡು ಮೆಚ್ಚುವವರನ್ನು ಹುಚ್ಚರೆಂದು ಕರೆಯಬೇಕೆ, ಅಥವಾ ಬೆಪ್ಪರೆಂದು ಕರೆಯಬೇಕೆ?" ಎಂಬ ಪ್ರಶ್ನೆಯೊಂದು ಮಾತ್ರ ಒಂದೇ ಸಮನೆ ಮಿದುಳನ್ನು ಮೀಟುತ್ತಿತ್ತು. (ಇದನ್ನು ಅವರೆದುರು ಹೇಳಲಿಲ್ಲ)



## ಲೇಖಕರ ಪರಿಚಯ



**ಬಿ.ಜಿ.ಎಲ್. ಸ್ವಾಮಿ** ಸಸ್ಯ ವಿಜ್ಞಾನದಲ್ಲಿ ತಮ್ಮ ಸಂಶೋಧನೆಗಳಿಂದ ಅಂತರಾಷ್ಟ್ರೀಯ ಮಾನ್ಯತೆ ಗಳಿಸಿದ ಬಿ.ಜಿ.ಎಲ್.ಸ್ವಾಮಿಯವರು ಖ್ಯಾತ ವಿದ್ವಾಂಸರಾದ ಡಿ.ವಿ.ಗುಂಡಪ್ಪನವರ ಸುಪುತ್ರರು. ಆಧುನಿಕ ಕನ್ನಡದ ಮಹತ್ವದ ಲೇಖಕರಲ್ಲಿ ಓರ್ವರಾದ ಇವರು ಸಂಗೀತ, ಚಿತ್ರಕಲೆ, ಶಾಸನ, ಸಂಶೋಧನೆ, ಪ್ರಾಚ್ಯವಸ್ತು– ಹೀಗೆ ಹಲವು ಕ್ಷೇತ್ರಗಳಲ್ಲಿ ಸಾಧನೆಗೈದವರು. ಕಾಲೇಜು ರಂಗ, ಕಾಲೇಜು ತರಂಗ, ಪ್ರಾಧ್ಯಾಪಕನ ಪೀಠದಲ್ಲಿ, ತಮಿಳು ತಲೆಗಳ ನಡುವೆ, ಅಮೆರಿಕಾದಲ್ಲಿ ನಾನು, ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೆರಿಕಾ– ಮುಂತಾದ ಕೃತಿಗಳನ್ನು ರಚಿಸಿರುವ ಇವರಿಗೆ 'ಹಸಿರು ಹೊನ್ನು' ಎಂಬ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿದೆ. ಪ್ರಸ್ತುತ ಪಠ್ಯಭಾಗವನ್ನು ಅವರ 'ಅಮೆರಿಕಾದಲ್ಲಿ ನಾನು' ಕೃತಿಯಿಂದ ಆರಿಸಲಾಗಿದೆ.

## ಓದಿ ತಿಳಿಯಿರಿ

ಸೂರು– ಛಾವಣಿ ಮತ್ತು ಅದರ ಇಳಿಜಾರಾದ ಪಕ್ಕ; ಆರಭ್ಯ– ಪ್ರಾರಂಭ ; ತೊಡುಗೆ– ತೊಟ್ಟುಕೊಳ್ಳುವ ವಸ್ತು ; ತಲೆ ತಲಾಂತರ–ಬಹಳ ವರ್ಷಗಳಿಂದ ; ಅವಮರ್ಯಾದೆ– ಅಪಮಾನ ; ಹ್ಯಾಟು – ಒಂದು ಬಗೆಯ ಟೋಪಿ ; ಸನ್ನಿಧಾನ – ಸಮೀಪ ; ಧೋತ್ರ– ಪಂಚೆ; ಕೂಲಂಕಷವಾಗಿ – ವಿವರವಾಗಿ, ಸಮಗ್ರವಾಗಿ ; ಪೋಕರಿತನ – ಪುಂಡತನ ; ತೊಡಕು – ತೊಂದರೆ ; ಮಾಟ – ಮಾದರಿ, ರೀತಿ ; ಹರವು– ಬಡಾವಣೆ ; ಪುರುಸೊತ್ತು– ಬಿಡುವು, ವಿರಾಮ ; ತಬ್ಬಿಬ್ಬಾಗು– ಕಕ್ಕಾವಿಕ್ಕಿಯಾಗು, ದಿಗ್ಭ್ರಮೆಯಾಗು; ದಿಗಿಲು – ಭಯ ;ಊದಾಬಣ್ಣ – ಬೂದುಬಣ್ಣ ;ಎರವಲು – ಸಾಲ; ವಿಶದ – ಸ್ಪಷ್ಟ; ಅಭ್ಯಂತರ – ಅಡ್ಡಿ ; ಬೆಪ್ಪ – ದಡ್ಡ.

## ಗಮನಿಸಿ ತಿಳಿಯಿರಿ

ಚೌಲ– ಮಗುವಿನ ಹುಟ್ಟುಗೂದಲನ್ನು ತೆಗೆಸುವುದಕ್ಕೆ ಮಾಡುವ ಸಮಾರಂಭ.

ಮುಂಜಿ– ಉಪನಯನ, ಬ್ರಹ್ಮೋಪದೇಶ, ಜನಿವಾರ ಹಾಕಿ ಮಂತ್ರೋಪದೇಶ ಮಾಡುವ ಸಮಾರಂಭ. ಮಕ್ಕರಿ– ಬಿದಿರಿನಿಂದ ಮಾಡಿದ ಬುಟ್ಟಿ. ಕಣ್ಣು ಬಾಯಿ ಬಿಟ್ಟು ನೋಡು– ಆಶ್ಚರ್ಯದಿಂದ ನೋಡು. ಪಾಯಿಂಟಿಗೆ ಬರುವುದು– ಮುಖ್ಯ ವಿಷಯಕ್ಕೆ ಬರುವುದು.

ಸೂಟು– ಒಂದು ಬಗೆಯ ಪುರುಷರ ಉಡುಗೆ

ಖಜಾಂಚಿ– ಹಣಕಾಸಿನ ಮೇಲ್ವಿಚಾರಕ;



## ಅಭ್ಯಾಸ ಚಟುವಟಿಕೆಗಳು

**ಅ) ಕೆಳಗಿನ ಪ್ರತಿಯೊಂದು ಪ್ರಶ್ನೆಗೂ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ನಮ್ಮಲ್ಲಿ ಹಿರಿಯರನ್ನು ಕಾಣುವಾಗ ಯಾವುದು ಮರ್ಯಾದೆ ಆಗಿದೆ ?

೨. ಲೇಖಕರಿಗೆ ಹ್ಯಾಟನ್ನು ಹಾಕಿಕೊಂಡರೆ ಯಾವ ಅನುಭವವಾಗುತ್ತದೆ?

೩. ಪರದೇಶಗಳಿಂದ ಹಿಂತಿರುಗಿದ್ದ ಗೆಳೆಯರು ಲೇಖಕರಿಗೆ ಏನೆಂದು ಉಪದೇಶ ಮಾಡಿದರು?

೪. ಲೇಖಕರು ಆರಿಸಿಕೊಂಡ ಟೋಪಿ ಯಾವ ಶೈಲಿಯದು?

೫. ಅಮೆರಿಕಾದ ಯಾವ ಪ್ರದೇಶದಲ್ಲಿ ಲೇಖಕರು ಕೆಲಸ ಮಾಡುತ್ತಿದ್ದರು?

೬. ಮುದುಕಿ ಮತ್ತು ಡೋರಿ ಲೇಖಕರಿಂದ ಏನನ್ನು ಎರವಲು ಪಡೆದರು?

೭. ಜನರು ಯಾವುದರ ಬಗೆಗೆ ಡೋರಿಯ ಕುಟುಂಬವನ್ನು ವಿಚಾರಿಸುತ್ತಿದ್ದರು?

ಆ) ಕೆಳಗಿನ ಪ್ರತಿಯೊಂದು ಪ್ರಶ್ನೆಗೂ ಮೂರು–ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿರಿ.

೧. 'ತಲೆಗೊಂದು ಸೂರು' ಎಂಬ ಸಂಪ್ರದಾಯ ಹೇಗೆ ನಡೆದುಬಂದಿದೆ?

೨. ಅಮೇರಿಕನ್ನರಲ್ಲಿ ಹ್ಯಾಟ್ ಧರಿಸುವ ಬಗೆಗಿನ ನಾಗರಿಕ ಲಕ್ಷಣ ಯಾವುದು ?

೩. ಲೇಖಕರ ಟೋಪಿ ಹೇಗಿತ್ತು?

೪. ಟೋಪಿಯ ಬಗ್ಗೆ ಪೇಪರ್‌ನಲ್ಲಿ ಬಂದ ವಿಷಯವೇನು?

ಇ) **ಸಂದರ್ಭ ಸಹಿತ ವಿವರಿಸಿರಿ.**

೧. ತಲೆಯುಡುಗೆಯ ನಂಟು ಹಿಂದೂ ಜನಾಂಗಕ್ಕೆ ಮಾತ್ರ ಸೇರಿದ್ದಲ್ಲ.

೨. ಹ್ಯಾಟಿಲ್ಲದೆ ಪರದೇಶ ಪ್ರಯಾಣ ಮಾಡುವುದುಂಟೆ?

೩. ನೀವು ಹ್ಯಾಟು ಹಾಕಿಕೊಳ್ಳುವುದಿಲ್ಲವೆ? ಅದರಂತೆಯೇ ಇದೂ.

೪ ಡೋರಿಯ ಹತ್ತಿರ ಈ ಗವನಿಗೊಪ್ಪುವ ತಲೆಯುಡುಗೆಯಿಲ್ಲ.

ಈ) ಈ ಪಾಠದಲ್ಲಿಬಂದಿರುವ ನಾಲ್ಕು ಇಂಗ್ಲಿಷ್ ಭಾಷೆಯ ಪದಗಳನ್ನು ಗುರುತಿಸಿ ಬರೆಯಿರಿ.

ಉ) ಈ ಕೆಳಗಿನ ಪದಗಳನ್ನು ಬಿಡಿಸಿ ಬರೆದು, ಸಂಧಿಯ ಹೆಸರನ್ನು ತಿಳಿಸಿರಿ.

ನಮ್ರತೆಯಿಂದ. ಮಳೆಗಾಲ. ಇನ್ನೊಂದು. ಲಾಂಛನವನ್ನು. ತಲೆಗೂದಲು

ಊ) ಈ ಕೆಳಗಿನ ಪದಗಳಿಗೆ ನಿಘಂಟು ನೋಡಿ ಅರ್ಥ ಬರೆಯಿರಿ.

ನಮ್ರತೆ. ಲಾಂಛನ. ವಿಮುಖ.



## ವ್ಯಾಕರಣಾಭ್ಯಾಸ

**ಈ ಕೆಳಗಿನ ವಾಕ್ಯಗಳನ್ನು, ಮತ್ತು ಕೆಳಗೆ ಗೆರೆ ಎಳೆದ ಪದಸಮೂಹವನ್ನು ಗಮನಿಸಿರಿ.**

೧. ಸ್ಪರ್ಧೆಯ ಫಲಿತಾಂಶ ತಿಳಿಯಲು ರಾಧಾ *ಒಂಟಿ ಕಾಲಿನ ಮೇಲೆ ನಿಂತಿದ್ದಳು.*

೨. ಕರೀಮನ ಸ್ನೇಹಿತನೇ ಅವನಿಗೆ *ಟೋಪಿ ಹಾಕಿ* ಹೋದ.

೩. ತಂದೆ ಹೇಳಿದ್ದಕ್ಕೆಲ್ಲ ಮೇರಿ *ತಲೆಯಾಡಿಸಿದಳು.*

ಗೆರೆ ಎಳೆದ ಪದಗಳನ್ನು ಮತ್ತೊಮ್ಮೆ ಓದಿ. ಇಲ್ಲಿ ಒಂದಕ್ಕಿಂತ ಹೆಚ್ಚು ಪದಗಳಿವೆ. ಇವುಗಳಿಗೆ ಪ್ರತ್ಯೇಕವಾಗಿ ಸಾಮಾನ್ಯ ಅರ್ಥ ಒಂದಿದ್ದರೂ, ಇಲ್ಲಿ ಈ ಪದಗಳ ಸಮೂಹಕ್ಕೆ ಬೇರೆಯಾದ ಅರ್ಥವಿದೆ. ಉದಾಹರಣೆಗೆ– ಒಂಟಿ ಕಾಲಿನ ಮೇಲೆ ನಿಲ್ಲು– ಎಂದರೆ, ಒಂದು ಕಾಲಿನ ಮೇಲೆ ನಿಲ್ಲು ಎಂದಲ್ಲ, ಬದಲಾಗಿ ಬಹಳ ಕುತೂಹಲದಿಂದಿರು ಎಂದರ್ಥ. ಟೋಪಿ ಹಾಕು ಎಂದರೆ ಮೋಸಮಾಡು ಎಂದು, ತಲೆಯಾಡಿಸು ಎಂದರೆ ಒಪ್ಪಿಗೆ ಸೂಚಿಸು ಎಂದು ಅರ್ಥವಾಗುತ್ತದೆ. ಹೀಗೆ ವಿಶೇಷಾರ್ಥ ಬರುವಂತೆ ಬಳಸುವ ಪದಗುಚ್ಛಗಳನ್ನು ನುಡಿಗಟ್ಟುಗಳು ಎನ್ನುವರು. ಇವು ನಮ್ಮ ಮಾತಿಗೆ ಒಂದು ಶೋಭೆಯನ್ನು ತರುತ್ತವೆ.

**ಈ ಕೆಳಗಿನ ಪ್ರತಿಯೊಂದು ನುಡಿಗಟ್ಟನ್ನೂ ಬಳಸಿ ವಾಕ್ಯರಚಿಸಿರಿ.**

೧. ಕಣ್ಣು ಬಾಯಿ ಬಿಟ್ಟು ನೋಡು. ೨. ಕಾಲಿಗೆ ಬುದ್ಧಿ ಹೇಳು ೩. ತಲೆ ಓಡಿಸು.

## ಪ್ರಾಯೋಗಿಕ ಚಟುವಟಿಕೆ

ಅ) ಲೇಖಕರು ಡೋರಿ ಮತ್ತು ಅವಳ ತಾಯಿಯನ್ನು ಬಸ್ ನಿಲ್ದಾಣದಲ್ಲಿ ಭೇಟಿಯಾದ ಪ್ರಸಂಗವನ್ನು ತರಗತಿಯಲ್ಲಿ ಅಭಿನಯಿಸಿರಿ.

ಆ) ಈ ಕೆಳಗಿನ ಪ್ರಕಟಣೆಯನ್ನು ಓದಿಕೊಂಡು, ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

**ಕರ್ನಾಟಕ ಕಲಾ ವೇದಿಕೆ, ಚಿತ್ರದುರ್ಗ**

**ನಳ : ದಮಯಂತಿ**

ಗೊಂಬೆಯಾಟ ಪ್ರದರ್ಶನ

**ದಿನಾಂಕ :** 24.06.2013

**ಸ್ಥಳ :** ಪುರಭವನ, ಚಿತ್ರದುರ್ಗ

**ಸಮಯ :** ಸಂಜೆ 5 ಗಂಟೆ

**ಪ್ರವೇಶ ಉಚಿತ**

**ಎಲ್ಲರಿಗೂ ಆದರದ ಸ್ವಾಗತ**

**ಪ್ರತಿಯೊಂದು ಪ್ರಶ್ನೆಗೂ ಒಂದೊಂದು ವಾಕ್ಯದಲ್ಲಿ ಉತ್ತರ ಬರೆಯಿರಿ.**

೧. ಗೊಂಬೆಯಾಟ ಪ್ರದರ್ಶನವನ್ನು ಏರ್ಪಡಿಸಿರುವವರು ಯಾರು?

೨. ಪ್ರದರ್ಶನದ ಸಮಯವೇನು?

೩. ಪುರಭವನದಲ್ಲಿ ಯಾವ ಗೊಂಬೆಯಾಟ ಪ್ರದರ್ಶನವಿದೆ?

೪. ಗೊಂಬೆಯಾಟಕ್ಕೆ ಪ್ರವೇಶ ಶುಲ್ಕ ಎಷ್ಟು?

**ಇ ಕೆಳಗಿನ ಪದ್ಯದಲ್ಲಿರುವ ಅನುಕರುಣಾವ್ಯಯಗಳನ್ನು ಗುರುತಿಸಿ ಬರೆಯಿರಿ.**

ಫಳ ಫಳ ಮಿಂಚು
ಗುಡು ಗುಡು ಗುಡುಗು
ರಪ ರಪ ಮಳೆಯ ನೋಡಲ್ಲಿ!
ಧಡ ಧಡ ಓಡುವ
ಥಕ ಥಕ ಕುಣಿಯುವ
ಗಿರಿ ಗಿರಿ ತಿರುಗುವ ಮಳೆಯಲ್ಲಿ!

ಪಟ ಪಟ ಹನಿಯು
ಜುಳು ಜುಳು ನೀರು
ಗಡ ಗಡ ನಡುಗುವ ಚಳಿಯಲ್ಲಿ!
ಸರ ಸರ ಕಾಗದ ದೋಣಿಯ ಮಾಡಿ
ಕಾಲುವೆ ನೀರಲಿ ತೇಲಿಸುವ
ಕಾಮನ ಬಿಲ್ಲು ಬರುವುದೆ ಎಂದು
ಕಾಯುವ ಜಿಟಿ ಜಿಟಿ ಮಳೆಯಲ್ಲಿ!

**ಬೇರೆ ಸಂಸ್ಕೃತಿಯನ್ನು ಪ್ರೀತಿಸು, ನಿನ್ನ ಸಂಸ್ಕೃತಿಯಲ್ಲಿ ಜೀವಿಸು**

* * *

ಪದ್ಯ ಪಾಠ

# ೧೩. ಮುದ್ದು ಕಂದ

–ಜನಪದ

**ಆಶಯ :** ಜನಸಾಮಾನ್ಯರು ರಚಿಸಿದ ಸಾಹಿತ್ಯ ವಿಪುಲವೂ ವೈವಿಧ್ಯ ಪೂರ್ಣವೂ ಆದುದಾಗಿದೆ. ಜನಪದರು ತಮ್ಮ ಜೀವನದ ಅನುಭವಗಳಿಗೆ ಬಣ್ಣ ತುಂಬಿ, ಆಕಾರ ನೀಡಿದ್ದು ಈ ಸಾಹಿತ್ಯದ ಮೂಲಕ. ಕನ್ನಡ ಸಾಹಿತ್ಯದಲ್ಲಿ ಜನಪದ ಸಾಹಿತ್ಯಕ್ಕೆ ವಿಶಿಷ್ಟ ಸ್ಥಾನವಿದೆ. ಈ ಜನಪದ ಸಾಹಿತ್ಯದ ಸೃಷ್ಟಿಕಾರ್ಯ ಪುರುಷ ಹಾಗೂ ಮಹಿಳೆ ಇಬ್ಬರಿಂದಲೂ ನಡೆದಿದೆ. ಜನಪದ ಸಾಹಿತ್ಯದಲ್ಲಿ ತ್ರಿಪದಿಯೇ ಪ್ರಮುಖವಾಗಿರುತ್ತದೆ. ಬಿಡಿರಚನೆಗಳಾದ ಈ ತ್ರಿಪದಿಗಳಲ್ಲಿ ಜನಪದರು ತಮ್ಮ ಬದುಕಿನ ಸರಸ–ವಿರಸ, ನೋವು–ನಲಿವು, ಪ್ರೀತಿ–ವಾತ್ಸಲ್ಯ, ಆಸರಿಕೆ–ಬೇಸರಿಕೆ ಮೊದಲಾದ ಅನುಭವಗಳನ್ನು ಪ್ರಕಟಪಡಿಸಿದ್ದಾರೆ. ಪ್ರಸ್ತುತ ಪದ್ಯದಲ್ಲಿ ತಾಯಿ ತನ್ನ ಮಗುವಿನ ಮೇಲೆ ಹೊಂದಿರುವ ಪ್ರೀತಿ ವಿವಿಧ ರೀತಿಯಲ್ಲಿ ಹೊರಹೊಮ್ಮಿದೆ.

ತೊಟ್ಟಿಲಿನೊಳಗೆ ಪುಟ್ಟ ಕಂದ ಮಲಗ್ಯವನೆ
ಸೃಷ್ಟಿಗೊಡೆಯನ ಮಡದಿಯ । ಪಾರ್ವತಿದೇವಿ
ದೃಷ್ಟಿ ತಗಲ್ಯಾವು ತೆರೆಹಾಕ

ಹಸಿರಂಗಿ ತೊಡೆಸೀದ ಹಾಲ್ಗಡಗ ಇಡಸೀದ
ಹಳ್ಳಕೆ ನೀನು ಬರಬ್ಯಾಡ । ನನ ಕಂದ
ಬೆಳ್ಳಕ್ಕಿ ಹಿಂಡು ಬೆದರ್‍ಯಾವ ॥



ತವರೂರಿಗ್ಹೋದಾಗ ನವಿಲ ಬಣ್ಣದ ಪಕ್ಷಿ
ತಲಿಬ್ಯಾನಿಯೆದ್ದು ಅಳುತಿತ್ತು । ಕಂದನ
ಚೆಲುವಿಕೆ ನೋಡಿ ನಗುತಿತ್ತು ॥

ಗುಜ್ಜಿ ನನ ಕಂದಯ್ಯ ಗೆಜ್ಜೆ ಸಪ್ಪಳ ಕೇಳಿ
ನಿಬ್ಬಣದೆತ್ತು ಬೆದರ್‍ಯಾವ । ಬೆಟ್ಟಸೇರಿ
ಮಧ್ಯಾಣದ ಮೇವ ಮರೆತಾವ

ಆಚಾರಕ್ಕರಸಾಗು ನೀತಿಗೆ ಪ್ರಭುವಾಗು
ಮಾತಿನಲಿ ಚೂಡಾಮಣಿಯಾಗು । ಕಂದಯ್ಯ
ಜ್ಯೋತಿಯೆ ಆಗು ಜಗಕೆಲ್ಲ ॥

**ಕವಿ ಪರಿಚಯ:**

ಜನಪದ ಸಾಹಿತ್ಯ ನಿರ್ದಿಷ್ಠ ವ್ಯಕ್ತಿ ರಚನೆಯಲ್ಲ. ಅದು ಸಮೂಹ ಜನ್ಯ. ತಲೆಮಾರಿನಿಂದ ತಲೆಮಾರಿಗೆ ಬಾಯಿಂದ ಬಾಯಿಗೆ ಬೆಳೆದು ಬಂದಿರುವ ಜನಪರ ಕಾವ್ಯ, ಸಾಮೂಹಿಕ ಜೀವನಕ್ಕೆ ಹಿಡಿದ ಕನ್ನಡಿಯಂತಿದೆ. ಇಲ್ಲಿಯ ಜನಪದ ಪದ್ಯಗಳು ತ್ರಿಪದಿಯಿಂದ ಕೂಡಿವೆ. ತ್ರಿಪದಿ ಎಂದರೆ ಮೂರು ಸಾಲಿನ ಪದ್ಯ.

**ಓದಿ ತಿಳಿಯಿರಿ:**

**ಮಲಗ್ಯವನೆ** – ಮಲಗಿರುವನು ; **ಸೃಷ್ಟಿಗೊಡೆಯ** – ಭಗವಂತ ;
**ತಗಲ್ಯಾವು**– ತಗಲುತ್ತವೆ ; **ಹಸಿರಂಗಿ**– ಹಸಿರು ಅಂಗಿ ;
**ಬೆದರ್ಯಾವ**– ಬೆದರುತ್ತವೆ ; **ತಲಿಬ್ಯಾನಿ** – ತಲೆ ನೋವು ;
**ಗುಜ್ಜಿ** – ಚಿಕ್ಕಮಗು ; **ಮಧ್ಯಾಣ** – ಮಧ್ಯಾಹ್ನ ; **ಚೂಡಾಮಣಿ** – ಒಂದು ಅನರ್ಘ್ಯ ರತ್ನ ;
**ಬೆಳ್ಳಕ್ಕಿ** – ಕೊಕ್ಕರೆ .

**ಗಮನಿಸಿ ತಿಳಿಯಿರಿ:**

**ದಿಬ್ಬಣ** – ಮದುವೆ ಮೆರವಣಿಗೆ

**ಹಾಲ್ಗಡಗ** – ಮಕ್ಕಳ ಕಾಲಿಗೆ ತೊಡಿಸುವ ಬೆಳ್ಳಿ ಕಡಗ

## ಅಭ್ಯಾಸ ಚಟುವಟಿಕೆ

**ಅ. ಈ ಕೆಳಗಿನ ಪ್ರತಿಯೊಂದು ಪ್ರಶ್ನೆಗೂ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ:**

೧. ಪುಟ್ಟ ಕಂದಯ್ಯನು ಎಲ್ಲಿ ಮಲಗಿದ್ದಾನೆ?

೨. ತನ್ನ ಕಂದನಿಗೆ ತಾಯಿಯು ಯಾವ ದೃಷ್ಟಿ ತಗಲುತ್ತದೆ ಎಂದಿದ್ದಾಳೆ?

೩. ತಾಯಿ ಕಂದಯ್ಯನಿಗೆ ಏನೇನು ಹಾಕಿ ಅಲಂಕಾರಗೊಳಿಸಿರುವಳು?

೪. ನವಿಲ ಬಣ್ಣದ ಪಕ್ಷಿ ಏಕೆ ಅಳುತ್ತಿತ್ತು?

೫. ನಿಬ್ಬಣದೆತ್ತು ಏಕೆ ಬೆದರುತ್ತವೆ?

೬. ತಾಯಿ ತನ್ನ ಕಂದನ ಮಾತು ಹೇಗಿರಬೇಕೆಂದು ಹಾರೈಸಿರುವಳು?

**ಆ.) ಈ ಕೆಳಗಿನ ಪ್ರತಿಯೊಂದು ಪ್ರಶೆಗೂ ಮೂರು– ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿರಿ :**

೧. ಪುಟ್ಟ ಕಂದನ ಸುಖನಿದ್ರೆ ಹಾಗೂ ಅಲಂಕಾರದ ಕುರಿತು ತಾಯಿ ಹೊಂದಿರುವ ಅಭಿಮಾನ ಎಂತಹದು?

೨. ಪುಟ್ಟ ಕಂದನ ಚೆಲುವಿಕೆ ಮತ್ತು ಆಟವನ್ನು ಕುರಿತು ತಾಯಿ ಏನೆಂದು ವರ್ಣಿಸಿರುವಳು?

೩. ಆಚಾರ, ನೀತಿ ಮತ್ತು ಮಾತಿನ ಕುರಿತು ತಾಯಿ ತನ್ನ ಮಗುವಿಗೆ ಏನೆಂದು ಹಾರೈಸಿರುವಳು?

**ಇ. ಕೆಳಗೆ ಕೊಟ್ಟಿರುವ ಪ್ರತಿಯೊಂದು ಪ್ರಶ್ನೆಗೂ ನಾಲ್ಕು ಉತ್ತರಗಳನ್ನು ನೀಡಲಾಗಿದೆ. ಅವುಗಳಲ್ಲಿ ಸೂಕ್ತವಾದದ್ದನ್ನು ಆರಿಸಿ ಬರೆಯಿರಿ :**

೧. ಸೃಷ್ಟಿಗೊಡೆಯನ ಮಡದಿ______________

ಅ. ಪಾರ್ವತಿ ಬ. ನಿರ್ಮಲಾ ಕ. ಗಾಯತ್ರಿ ಡ. ಸಾವಿತ್ರಿ

೨. ಮಗುವಿನ ಅಲಂಕಾರ ನೋಡಿ ______________ ಬೆದರುತ್ತವೆ

ಅ. ಗುಬ್ಬಿ ಬ. ಕಾಗೆ ಕ. ಬೆಳ್ಳಕ್ಕಿ ಡ. ನವಿಲು

ಳ. ನಿಬ್ಬಣದೆತ್ತು ಬೆದರುವುದು ________ ಸಪ್ಪಳದಿಂದ
ಅ. ಬಳೆ ಸಪ್ಪಳ ಬ. ಗೆಜ್ಜೆ ಸಪ್ಪಳ ಕ. ಘಂಟೆ ಸಪ್ಪಳ ಡ. ತಟ್ಟೆ ಸಪ್ಪಳ

ಱ. ತಾಯಿ ತನ್ನ ಮಗು ಮಾತಿನಲ್ಲಿ ಹೀಗಿರಬೇಕೆಂದಿದ್ದಾಳೆ
ಅ. ಚೂಡಾಮಣಿ ಬ. ಸ್ಪರ್ಶಮಣಿ ಕ. ನಾಟ್ಯಮಣಿ ಡ. ಪರುಷಮಣಿ

**ಈ. ಈ ಕೆಳಗಿನ ಪದಗಳಿಗೆ ಸಮಾನಾರ್ಥಕ ಪದಗಳನ್ನು ನಿಘಂಟಿನಿಂದ ಸಂಗ್ರಹಿಸಿ ಬರೆಯಿರಿ**

ಸೃಷ್ಟಿ , ಹಿಂಡು , ಚೆಲುವು , ಮೇವು , ಜ್ಯೋತಿ

## ವ್ಯಾಕರಣಾಭ್ಯಾಸ

**ಕೆಳಗೆ ಕೊಟ್ಟಿರುವ ಪದಗಳಿಗೆ ಗ್ರಾಂಥಿಕ ರೂಪ ಬರೆಯಿರಿ.**

ಬ್ಯಾಸಕಿ , ಮಲಗ್ಯವನೆ, ಬೆದರ‍್ಯಾವ, ತಲಿಬ್ಯಾನಿ.

## ಪ್ರಾಯೋಗಿಕ ಚಟುವಟಿಕೆ

**ಅ.** ಈ ಪದ್ಯದಲ್ಲಿ ಬಳಸಲಾಗಿರುವ ಗ್ರಾಮ್ಯ ಪದಗಳನ್ನು ಸಂಗ್ರಹಿಸಿ, ಅವುಗಳಿಗೆ ಗ್ರಾಂಥಿಕ ರೂಪ ಬರೆಯಿರಿ

ಆ. ಈ ಪದ್ಯವನ್ನು ಕಂಠಪಾಠ ಮಾಡಿ ರಾಗಬದ್ಧವಾಗಿ ಹಾಡಿರಿ

ಇ. ಹಲಸಂಗಿ ಗೆಳೆಯರು ಸಂಗ್ರಹಿಸಿದ ' ಗರತಿಯ ಹಾಡು ' ಕೃತಿಯನ್ನು ಓದಿರಿ.

ಈ. ಜನಪದ ತ್ರಿಪದಿಗಳಲ್ಲಿ ಮೂಡಿ ಬಂದಿರುವ ತಾಯಿಯ ಪ್ರೇಮವನ್ನು ಕುರಿತು ಓದಿ ತಿಳಿಯಿರಿ.



## ವ್ಯಾಕರಣಾಭ್ಯಾಸ

**ಕೆಳಗೆ ಕೊಟ್ಟಿರುವ ಗ್ರಾಮ್ಯ ನುಡಿಗಳ ಗ್ರಾಂಥಿಕ ರೂಪ ಬರೆಯಿರಿ.**

ಬ್ಯಾಸಗಿ. ಮಲಗ್ಯವನೆ. ಬರಬ್ಯಾಡ. ಬೆದರ‍್ಯಾವ.

## ಪೂರಕ ಓದು

ಯಾಕಳುವೆ ಎಲೆ ರಂಗ ಬೇಕಾದ್ದು ನಿನಗೀವೆ
ನಾಕೆಮ್ಮೆ ಕರೆದ ನೊರೆ ಹಾಲು–ಸಕ್ಕರೆ
ನೀ ಕೇಳಿದಾಗ ಕೊಡುವೆನು

ಅಳುವ ಕಂದನ ತುಟಿಯು ಹವಳದ ಕುಡಿಹಾಂಗ
ಕುಡಿಹುಬ್ಬು ಬೇವಿನೆಸಳ್ಹಾಂಗ–ಕಣ್ನೋಟ
ಶಿವನ ಕೈಯಲಗು ಹೊಳೆದಾಂಗ

ಅತ್ತರೆ ಅಳಲವ್ವ ಈ ಕೂಸು ನನಗಿರಲಿ
ಕೆಟ್ಟರೆ ಕೆಡಲಿ ಮನೆಗೆಲಸ–ಕಂದನಂಥ
ಮಕ್ಕಳಿರಲವ್ವ ಮನೆತುಂಬ.

ಜನಪದ

ಗದ್ಯಪಾಠ

# ೧೪. ಬುಲ್‌ಡೋಜರ್ ಸಂಸ್ಕೃತಿ

– ನಾಗೇಶ ಹೆಗಡೆ

**ಆಶಯ :** ನಿಸರ್ಗದ ನಿತ್ಯ ಕ್ರಿಯೆಗಳನ್ನು ಹತ್ತಿಕ್ಕಲೆಂದೂ, ತಿದ್ದಲೆಂದೂ, ಈ 20ನೇ ಶತಮಾನದಲ್ಲಿ ಅವತರಿಸಿ ಬಂದ ಯಂತ್ರ ಬುಲ್‌ಡೋಜರ್, ನೂರು ಜನರ ಕೆಲಸವನ್ನು ತಾನೊಂದೇ ಕ್ಷಣಾರ್ಧದಲ್ಲಿ ಮಾಡಿ ಮುಗಿಸುವ ಈ ಯಂತ್ರ, ಬಡವ–ಬಲ್ಲಿದರ ಮಧ್ಯೆಯ ಅಂತರವನ್ನೂ ನೂರುಪಟ್ಟು ಹೆಚ್ಚಿಸುತ್ತದೆ. ನೆಲವನ್ನು ಅಗೆದು ಬಗೆದು ಬದಿಗೆ ತಳ್ಳುವುದೇ ಅಭಿವೃದ್ಧಿಯ ಮಹಾಕಾರ್ಯವೆಂಬ ಭ್ರಮೆ ಹುಟ್ಟಿಸಿ ಪ್ರಕೃತಿಯನ್ನು ವಿಕೃತಿಯಾಗಿ ಪರಿವರ್ತಿಸುತ್ತದೆ.




ಅರವತ್ತರ ದಶಕದಲ್ಲಿ ಶಿರಸಿ ಬಳಿಯ ಯಡಳ್ಳಿ ಹೈಸ್ಕೂಲ್‌ನಲ್ಲಿ ನಾನು ಓದುತ್ತಿದ್ದೆ. ಪಕ್ಕದ ಹೆದ್ದಾರಿಯಲ್ಲಿ ಒಂದು ದಿನ ಬುಲ್‌ಡೋಜರ್ ಗುಡುಗುಡು ಸದ್ದು ಕೇಳಿ, ಅದಿನ್ನೂ ಫರ್ಲಾಂಗ್ ದೂರವಿರುವಾಗಲೇ ನೋಡಲು ನಾವೆಲ್ಲ ಓಡಿದ್ದೇ ಓಡಿದ್ದು. ಅದರ ಸರಪಳಿ ಚಕ್ರ, ಭಾರಿ ಗಾತ್ರ, ಕಬಂಧ ಬಾಹುಗಳು, ಟಾರ್ ರೋಡಿನಲ್ಲಿ ಮೂಡುವ ಅದರ ಚಕ್ರದ ಹಲ್ಲುಗಳ ಗುರುತುಗಳು ಬೆಕ್ಕಸ ಬೆರಗಾಗಿ ನಾವೆಲ್ಲ ನೂರಿನ್ನೂರು ಮಕ್ಕಳು ದಿಬ್ಬಣದಂತೆ ಅದರೊಂದಿಗೇ ನಡೆಯುತ್ತ ಬಂದೆವು. ಚಾಲಕ ಮದುಮಗನಂತೆ ಅಷ್ಟೆತ್ತರದಲ್ಲಿ ಕೂತು ನಮ್ಮ ಕುತೂಹಲ ತಣಿಸಲೆಂದು ಕಪಿಚೇಷ್ಟೆ ಮಾಡುತ್ತಿದ್ದ.

ಹೈಸ್ಕೂಲು ಸಮೀಪಿಸುವಷ್ಟರಲ್ಲಿ ನಮ್ಮ ಶಿಕ್ಷಕರೂ ಬುಲ್‌ಡೋಜರ್ ನೋಡಲು ರಸ್ತೆಪಕ್ಕಕ್ಕೆ ಬಂದು ನಿಂತಿದ್ದರು. ಚಾಲಕ ತನ್ನ ವಾಹನವನ್ನು ನಿಧಾನಗೊಳಿಸಿದ. ನಮ್ಮನ್ನೆಲ್ಲ ದೂರ ಸರಿಯುವಂತೆ ಸನ್ನೆ ಮಾಡಿ – ಗಕ್ಕನೆ ಇಡೀ ಗಾಡಿಯನ್ನು ೯೦ ಅಂಶ ಕೋನ ಮಾಡಿ ತಿರುಗಿಸಿದ. ರಸ್ತೆ ಪಕ್ಕದ ಕಾಲುವೆಯನ್ನೂ ದಿಬ್ಬವನ್ನೂ ಕಡೆಗಣಿಸಿ ಆ ಬೃಹತ್ ಎಂಜಿನ್ನು ಅನಾಮತ್ತಾಗಿ ಹೊಟ್ಟೆ ಹೊಸೆಯುತ್ತ ಬೆಟ್ಟ ಏರಿತು. ನಾವೆಲ್ಲ ಅವಾಕ್ಕಾಗಿ ನೋಡುತ್ತಿರುವಂತೇ ಅಲ್ಲಿ ಬೆಳದಿದ್ದ ಹತ್ತಾರು ಮರಗಳ ಪೈಕಿ ಅತ್ಯಂತ ದೊಡ್ಡ ಮರದ ಬುಡಕ್ಕೆ ಅದು ತನ್ನ ಮೂತಿಯನ್ನು ಒತ್ತಿತು. ಒಮ್ಮೆ ಜೋರಾಗಿ ಹೂಂಕರಿಸಿದಂತೆ ಸದ್ದು ಮಾಡಿ ದಢಾರೆಂದು ಆ ಮರವನ್ನು ಬೇರು ಸಹಿತ ಕಿತ್ತು ಬೀಳಿಸಿತು. ಈ ಮಹಾಕಾರ್ಯದಲ್ಲಿ ತನಗೆ ಏನೇನೂ ಶ್ರಮವಾಗಿಲ್ಲವೆಂಬುದನ್ನು

ತೋರಿಸಲೆಂಬಂತೆ ಒಮ್ಮೆ ಮೂತಿಯನ್ನು ಕೆಳಕ್ಕೆ ಮೇಲಕ್ಕೆ ಮಾಡಿ, ಮತ್ತೆ ೯೦ ಅಂಶ ಕೋನ ಮಾಡಿ ಕುರುಚಲು ಗಿಡಗಂಟೆಗಳನ್ನು ಹೊಸೆದು ಹಾಕುತ್ತ ಶಿಸ್ತಿನ ಯೋಧನಂತೆ ಠಕ್ಕೆಂದು ಪಕ್ಕಕ್ಕೆ ತಿರುಗುತ್ತ ರಸ್ತೆ ಸೇರಿ ತನ್ನ ಹಾದಿ ಹಿಡಿಯಿತು. ಚಾಲಕ ಹಿಂದಿರುಗಿ ನೋಡಿ ನಮಗೆಲ್ಲ ಕೈ ಬೀಸಿ ವಿದಾಯ ಹೇಳಿದ.

ಮುಂದೆ ಸುಮಾರು ಎರಡು ಮೂರು ವಾರಗಳ ಕಾಲ ನಮಗೆ ಅದೇ ಘಟನೆಯೇ ಚರ್ಚೆಯ ವಸ್ತುವಾಗಿತ್ತು. ಒಣಗುತ್ತ ಬಿದ್ದ ಆ ಹೆಮ್ಮರ ಪ್ರದರ್ಶನ ತಾಣವಾಗಿತ್ತು. ತಿಂಗಳಾರು ಕಳೆದರೂ ಮಾಸದಷ್ಟು ಆಳವಾಗಿ ಆ ದೈತ್ಯಯಂತ್ರ ಟಾರ್ ರಸ್ತೆಯನ್ನೂ, ಬೆಟ್ಟದ ಗಟ್ಟಿ ನೆಲವನ್ನೂ ನಮ್ಮೆಲ್ಲರ ಕೋಮಲ ಭಾವನೆಗಳನ್ನೂ ಘಾಸಿ ಮಾಡಿ ಹೋಗಿತ್ತು.

ಮುಂದೆ ನಾನು ಭೂವಿಜ್ಞಾನ ವಿದ್ಯಾರ್ಥಿಯಾಗಿ, ದೇಶದ ಭಾರೀ ಭಾರೀ ಗಣಿಗಳನ್ನೂ, ಬೃಹತ್ ನೀರಾವರಿ ಯೋಜನೆಗಳನ್ನು ಹತ್ತಿರದಿಂದ ನೋಡುವಂತಾದಾಗ ಬುಲ್‌ಡೋಜರ್‌ಗಳು ನನಗೆ ತೀರಾ ಸಮೀಪವಾದದುಂಟು.

ಮನುಷ್ಯನ ಲೌಕಿಕ ಅವಶ್ಯಕತೆಗಳನ್ನೂ, ಆಡಂಬರಗಳನ್ನೂ ಪೂರೈಸಿಕೊಳ್ಳಬೇಕೆಂದರೆ ಕುಡುಗೋಲಿನಷ್ಟೇ ಬುಲ್‌ಡೋಜರ್ ಕೂಡಾ ಅಗತ್ಯ ಎಂಬುದನ್ನು ನಾನು ನನಗೆ ಹೇಳಿಕೊಳ್ಳಲು ಯತ್ನಿಸುತ್ತೇನೆ. ನನ್ನ ಮನೆಯ ಒಲೆಯ ಮೇಲೆ ಅನ್ನ ಬೇಯಬೇಕೆಂದರೆ ಅಲ್ಯೂಮಿನಿಯಂ ಪಾತ್ರೆ ಬೇಕು; ಅದಕ್ಕೆ ಬೇಕಾದ ಬಾಕ್ಸಾಯಿಟ್ ಅದುರನ್ನು ಅಗೆಯಲು ಈ ದೈತ್ಯಯಂತ್ರ ಬೇಕು. ಅನ್ನ ಬೆಂದಿತೋ ಇಲ್ಲವೋ ನೋಡಲು ಬೆಳಕು ಬೇಕು; ವಿದ್ಯುತ್ ಸ್ಥಾವರ ನಿರ್ಮಾಣ ಮಾಡಲು ಬುಲ್‌ಡೋಜರ್ ಬೇಕು. ಮೂಲಕ್ಕೇ ಬರಬೇಕೆಂದರೆ, ಅಕ್ಕಿ ಬೆಳೆಯಲು ನೀರಾವರಿ ಬೇಕು; ಅಣೆಕಟ್ಟು ನಿರ್ಮಿಸಲು ಬುಲ್‌ಡೋಜರ್ ಬೇಕೇ ಬೇಕು.

ಆದರೂ ಕಾಂಪ್ರಮೈಸ್ ಸಾಧ್ಯವಾಗುತ್ತಿಲ್ಲ. ಕುದುರೆಮುಖದಿಂದ ಕಕ್ಕಲಾಗುತ್ತಿರುವ ಅದುರಿನ ಪುಡಿ ರಾಶಿ ರಾಶಿಯಾಗಿ ಬಂದು ಭದ್ರಾನದಿಗೆ ಬೆಟ್ಟದಷ್ಟು ಮೆಕ್ಕಲು ಸೇರಿಸಲು ಇದೇ ಬುಲ್‌ಡೋಜರ್ ಕಾರಣ. ಭದ್ರೆಯಲ್ಲಿ ನೀರಿನ ಒರತೆ ಕಡಿಮೆಯಾಗಿ, ಜಲಾಶಯದಲ್ಲಿ ತುಂಗಭದ್ರಾ ಅಚ್ಚುಕಟ್ಟು ಪ್ರದೇಶದಲ್ಲಿ ಅತಿಯಾದ ನೀರಾವರಿಯಿಂದಾಗಿ ಕೃಷಿ ಭೂಮಿಯಲ್ಲಿ ಜವುಳು –ಸವಳು ಶೇಖರವಾಗಿ ೨೫ ಸಾವಿರ ಹೆಕ್ಟೇರ್ ಗದ್ದೆ ನಿರರ್ಥಕವಾಗಲೂ ಇದೇ ಕಾರಣ. ನದಿಯಲ್ಲಿ ನೀರಿನ ಪ್ರಮಾಣ ಕಮ್ಮಿಯಾಗಿ, ಕಾರ್ಖಾನೆಗಳ ಮಾಲಿನ್ಯ ಮಡುಗಟ್ಟಿ ನಿಲ್ಲಲಿಕ್ಕೂ ಬುಲ್‌ಡೋಜರ್ ಕಾರಣ. ನಿಸರ್ಗದ ಶಕ್ತಿಗಳು ಲಕ್ಷಾಂತರ ವರ್ಷಗಳಿಂದ ನಿಧಾನವಾಗಿ ಕೆಲಸ ಮಾಡಿ ನಮ್ಮೆಲ್ಲರ ಬದುಕಿಗೆ ಅನುಕೂಲವಾಗುವಂತೆ ನಿರ್ಮಿಸಿಟ್ಟ ಸಮತೋಲನವನ್ನು ಒಂದೇ ಪಂಚವಾರ್ಷಿಕ ಯೋಜನೆಯಲ್ಲಿ ಅಧ್ವಾನ ಮಾಡಿ, ಮುಂದಿನ ಇಡೀ ಪೀಳಿಗೆಯ ಬದುಕು ದುಸ್ತರವಾಗುವಂತೆ ಮಾಡುವ ಅಪರಾಧಿಯೂ ಬುಲ್‌ಡೋಜರ್.

ಅಪರಾಧಿಯೋ ಅಪದ್ಬಾಂಧವ ಯಂತ್ರವೋ ತೂಗಿ ನೋಡಿ ಹೇಳಲು ನನಗಂತೂ ಸಾಧ್ಯವಿಲ್ಲ. ಈ ಯಂತ್ರದ ನೆರವಿನಿಂದ ಕೈಗೊಳ್ಳಲಾಗುತ್ತಿರುವ ಭಾರೀ ಯೋಜನೆಗಳಿಂದ ಭೂ ಜೀವಿಗಳಿಗೆ ಭಾರೀ ನಷ್ಟವಾಗುತ್ತಿದೆಯೆಂದು ಕೆಲವು ಅಧ್ಯಯನಗಳಿಂದ ಈಗೀಗ ಗೊತ್ತಾಗುತ್ತಿದೆ. ಆದರೂ ಯೋಜನಾ ತಜ್ಞರು ಇನ್ನಷ್ಟು ಭಾರೀ ಯೋಜನೆಗಳನ್ನು ಸಿದ್ಧಪಡಿಸುತ್ತಲೇ ಇದ್ದಾರೆ. ಈಗ ಕೈಗೊಳ್ಳಲಾಗುತ್ತಿರುವ ನರ್ಮದಾ ಕೊಳ್ಳ ಅಭಿವೃದ್ಧಿ ಯೋಜನೆಯಲ್ಲಿ ೨೫ ಸಾವಿರ ಕೋಟಿ ರೂಪಾಯಿ ವೆಚ್ಚದಲ್ಲಿ ೩೨ ದೊಡ್ಡ ಅಣೆಕಟ್ಟುಗಳು ನಿರ್ಮಾಣವಾಗಲಿವೆ. ಹತ್ತಿರ ಹತ್ತಿರ ಹತ್ತು ಲಕ್ಷ ಬಡಜನರು, ಆದಿವಾಸಿಗಳು ತಮ್ಮ ಭೂಮಿ – ಮನೆ ತ್ಯಜಿಸಿ ನಿರಾಶ್ರಿತರಾಗಲಿದ್ದಾರೆ. ಯಾರ ಅಭಿವೃದ್ಧಿ ಆಗಲಿದೆಯೆಂಬುದು ಮಾತ್ರ ಇನ್ನೂ ಸ್ಪಷ್ಟವಿಲ್ಲ.

ಪಂಚ ಮಹಾಭೂತಗಳ ಬಗ್ಗೆ ಹಾಗೂ ಪ್ರಕೃತಿ–ಪುರುಷರ ಏಕತೆಯ ಬಗ್ಗೆ ಉದಾತ್ತ ವಿಚಾರಗಳನ್ನಿಟ್ಟುಕೊಂಡು ಬಂದ ನಾವು ಕಳೆದ ಕೆಲವೇ ದಶಕಗಳಲ್ಲಿ ನೀರು, ಗಾಳಿ, ಭೂಮಿ, ಸಸ್ಯ, ಪ್ರಾಣಿಗಳ ಮಧ್ಯೆ ಹೀಗೇಕೆ ಸಮತೋಲನ ಬಿಗಡಾಯಿಸುವಲ್ಲಿ ತಲ್ಲೀನರಾಗಿದ್ದೇವೆ? ಅಭಿವೃದ್ಧಿ ಎಂದರೆ ಅರಣ್ಯ ಬಲಿದಾನ, ಬಂಜರು ಭೂಮಿಯ ವಿಸ್ತರಣೆ, ನೆಲಜಲ ಮಾಲಿನ್ಯ ಅನಿವಾರ್ಯವೆಂಬುದನ್ನು ಒಪ್ಪಿಕೊಳ್ಳತೊಡಗಿದ್ದೇವೆ ?

ಬುಲ್‌ಡೋಜರ್ ಸಂಸ್ಕೃತಿ ನಮಗೇಕೆ ಅಪ್ಯಾಯಮಾನವಾಗುತ್ತಿದೆ! ?

## ಲೇಖಕರ ಪರಿಚಯ:



ಉತ್ತರಕನ್ನಡ ಜಿಲ್ಲೆಯ ಬಕ್ಕಮನೆ ಊರಿನ ನಾಗೇಶಹೆಗಡೆ ಪರಿಸರದ ಬಗೆಗೆ ಗಾಢವಾಗಿ ಚಿಂತಿಸುವ ಪ್ರಮುಖ ಲೇಖಕರು. ಇವರು ಸ್ವಲ್ಪಕಾಲ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ್ದಾರೆ. ದೇಶ–ವಿದೇಶಗಳನ್ನು ಸಂಚರಿಸಿರುವ ಇವರು ವೈಜ್ಞಾನಿಕ ವಿಚಾರಗಳನ್ನು ಕನ್ನಡದಲ್ಲಿ ಸೊಗಸಾಗಿ ನಿರೂಪಿಸುತ್ತಾರೆ. ಸುಧಾ, ಪ್ರಜಾವಾಣಿ ಬಳಗದ ಪತ್ರಿಕೆಗಳಲ್ಲಿ ಕಾರ್ಯನಿರ್ವಹಿಸಿರುವ ಇವರ ವಿಶಿಷ್ಟ ಕೃತಿ 'ಇರುವುದೊಂದೇ ಭೂಮಿ'ಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ ದೊರೆತಿದೆ. ಈ ಪಠ್ಯಭಾಗವನ್ನು **'ಇರುವುದೊಂದೇ ಭೂಮಿ',** ಕೃತಿಯಿಂದ ಆರಿಸಲಾಗಿದೆ.



## ಓದಿ ತಿಳಿಯಿರಿ:

**ವಿಕೃತಿ–** ಕುರೂಪ, **ಬೆಕ್ಕಸಬೆರಗಾಗು–** ವಿಸ್ಮಯಗೊಳ್ಳು. **ಅದೃಷ್ಟ–** ಭಾಗ್ಯ. **ಕಬಂಧ–** ಮುಂಡ, ತಲೆಯಿಲ್ಲದ ದೇಹ. **ದಿಬ್ಬಣ–** ಮದುವೆಯ ಮೆರವಣಿಗೆ. **ಅನಾಮತ್ತು–** ಇಡಿಯಾಗಿ, ಪೂರ್ತಿಯಾಗಿ. **ವಿದಾಯ–** ಬೀಳ್ಕೊಡುಗೆ. **ಅಧ್ವಾನ–** ತೊಂದರೆ, ಹದಗೆಟ್ಟ. **ಕುಡುಗೋಲು–** ಕೊಯ್ಯುವ ಸಾಧನ. **ಮಡುಗಟ್ಟು–** ನಿಂತಲ್ಲೆ ನಿಲ್ಲು. **ನಿರ್ಗತಿಕ–** ಗತಿಯಿಲ್ಲದವ. **ತೊತ್ತು–** ಸೇವಕ/ಸೇವಕಿ. **ಪಾವಟಿಗೆ–** ಮೆಟ್ಟಿಲು

## ಗಮನಿಸಿ ತಿಳಿಯಿರಿ:

**ಆಪದ್ಬಾಂಧವ–** ಕಷ್ಟಕಾಲದಲ್ಲಿ ಸಹಾಯಕ್ಕೆ ಬರುವವ. **ಬುಲ್ಡೋಜರ್–** ಬೃಹತ್ ಕೆಲಸವನ್ನು ಮಾಡಲು ಬಳಸುವ ಒಂದು ಸಾಧನ. **ಭೂವಿಜ್ಞಾನ–** ಭೂಮಿಯ ರಚನೆಯ ಬಗೆಗೆ ಆಳವಾಗಿ ಅಧ್ಯಯನ ಮಾಡುವ ವಿಜ್ಞಾನ ಶಾಖೆ

## ಅಭ್ಯಾಸ ಚಟುವಟಿಕೆ:

**ಅ. ಈ ಕೆಳಗಿನ ಪ್ರತಿಯೊಂದು ಪ್ರಶ್ನೆಗೂ ಒಂದೊಂದು ವಾಕ್ಯದಲ್ಲಿ ಉತ್ತರಿಸಿ:**

೧. ನಾಗೇಶ ಹೆಗಡೆಯವರು ತಮ್ಮ ಹೈಸ್ಕೂಲ್ ಶಿಕ್ಷಣವನ್ನು ಎಲ್ಲಿ ಪಡೆದರು?

೨. ಲೇಖಕರು ಉಸಿರು ಬಿಗಿಹಿಡಿದು ಬುಲ್ಡೋಜರ್ ನೋಡಿದ್ದು ಎಲ್ಲಿ?

೩. ನಾಗೇಶ ಹೆಗಡೆಯವರಿಗೆ ಬುಲ್ಡೋಜರ್ ಯಾವಾಗ ಸಮೀಪವಾಗಿ ಕಾಣಿಸಿತು?

೪. ಕುದುರೆಮುಖದಿಂದ ಕಕ್ಕಲಾಗುತ್ತಿರುವ ಅದಿರಿನ ಪುಡಿ ರಾಶಿರಾಶಿಯಾಗಿ ಬಂದು ಯಾವ ನದಿಗೆ ಸೇರುತ್ತಿದೆ?

ಆ. **ಈ ಕೆಳಗಿನ ಪ್ರತಿಯೊಂದು ಪ್ರಶ್ನೆಗೂ ಮೂರು- ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿರಿ :**

೧. ಲೇಖಕರು ವರ್ಣಿಸಿರುವ ಬುಲ್ಡೋಜರ್ ಸ್ವರೂಪ ತಿಳಿಸಿರಿ.

೨. ಬುಲ್ಡೋಜರ್ ನಿರ್ವಹಿಸುವ ಕಾರ್ಯವನ್ನು ಸಂಕ್ಷಿಪ್ತವಾಗಿ ವಿವರಿಸಿರಿ.

೩. ಅರ್ಥಮೂವರ್ ಎಬ್ಬಿಸಿದ ಕೆಂಧೂಳನ್ನು ಲೇಖಕರು ಸೇವಿಸಿದ ಪ್ರದೇಶಗಳು ಯಾವುವು? ಹೆಸರಿಸಿರಿ.

೪. ಬುಲ್ಡೋಜರ್ ಜತೆಗೆ ಕಾಂಪ್ರಮೈಸ್ ಸಾಧ್ಯವಾಗುತ್ತಿಲ್ಲ ಎಂಬುದಕ್ಕೆ ಲೇಖಕರು ನೀಡಿದ ಕಾರಣಗಳಾವುವು?

ಅ. **ಕೆಳಗೆ ಕೊಟ್ಟಿರುವ ಪ್ರತಿಯೊಂದು ಪ್ರಶ್ನೆಗೂ ನಾಲ್ಕು ಉತ್ತರಗಳನ್ನು ನೀಡಲಾಗಿದೆ. ಅವುಗಳಲ್ಲಿ ಸೂಕ್ತವಾದದ್ದನ್ನು ಆರಿಸಿ ಬರೆಯಿರಿ.**

೧. ಅಲ್ಯುಮಿನಿಯಮ್ ಅದಿರಿನ ಹೆಸರು ___________

ಅ) ಬಾಕ್ಸಾಯಿಟ್ ಬ) ಹೆಮಟೈಟ್ ಕ) ಮ್ಯಾಗ್ನಟೈಟ್ ಡ) ಕ್ರೊಮೈಟ್

೨. ಒಲೆಯ ಮೇಲೆ ಅನ್ನ ಬೇಯಿಸಬೇಕಾದರೆ ಈ ಪಾತ್ರೆ ಬೇಕು.

ಅ) ಬಂಗಾರ ಬ) ಕಬ್ಬಿಣ ಕ) ಅಲ್ಯುಮಿನಿಯಮ್ ಡ) ಪ್ಲಾಸ್ಟಿಕ್

೩. ಯಡಳ್ಳಿ ಈ ತಾಲೂಕಿನ ಹಳ್ಳಿಯಾಗಿದೆ.

ಅ) ಶಿರಸಿ ಬ) ಸಿದ್ಧಾಪುರ ಕ) ಕುಮಟಾ ಡ) ಕಾರವಾರ

೪. ಲೇಖಕರು ಬುಲ್ಡೋಜರನ್ನು ಇದಕ್ಕೆ ಹೋಲಿಸಿದ್ದಾರೆ.

ಅ) ಕುಡುಗೋಲು ಬ) ಕೊಡಲಿ ಕ) ಗುದ್ದಲಿ ಡ) ಹಾರೆ

ಡ) **ಕೆಳಗಿನ ಪದಗಳನ್ನು ಬಿಡಿಸಿ ಸಂಧಿ ಹೆಸರಿಸಿರಿ.**

ಈಗೀಗ, ಜಲಾಶಯ, ಲಕ್ಷಾಂತರ, ಫಲಾಫಲ, ಸಂಗ್ರಹಾಲಯ



## ಪ್ರಾಯೋಗಿಕ ಚಟುವಟಿಕೆ

ಅ) ಈ ಪಾಠದಲ್ಲಿ ಬಂದಿರುವ ಆಂಗ್ಲಭಾಷಾ ಪದಗಳನ್ನು ಸಂಗ್ರಹಿಸಿ ಬರೆಯಿರಿ.

ಬ) ನಾಗೇಶ ಹೆಗಡೆಯವರ 'ಇರುವುದೊಂದೇ ಭೂಮಿ' ಕೃತಿಯನ್ನು ಓದಿರಿ.

ಕ) ಬುಲ್‌ಡೋಜರ್ ಯಂತ್ರದಿಂದ ಆಗುವ ಅನುಕೂಲ – ಹಾನಿ ಎರಡನ್ನೂ ಚರ್ಚೆ ಮಾಡಿ.

**ಶ್ರಮದ ಮೂಲದಲ್ಲೇ ಆನಂದದ ಅನುಭವ ಅಡಗಿದೆ**

* * *

## ಗದ್ಯಪಾಠ

# ೧೫. ಸಂತೋಷದ ಒಳಗುಟ್ಟು

**–ಸುಧಾ ಮೂರ್ತಿ**

(**ಆಶಯ:** ಮಾಡುವ ಕೆಲಸ ಯಾವುದೇ ಇರಲಿ, "ಕಾಯಕವೇ ಕೈಲಾಸ" ಎಂಬ ನಾಣ್ನುಡಿಯಂತೆ ಅವರವರ ಕೆಲಸದಲ್ಲಿ ಸಂತೋಷವನ್ನು ಕಾಣಬೇಕು. ಜೀವನದಲ್ಲಿಯ ಸಂತೋಷ ನಮ್ಮ ಕೈಯಲ್ಲಿದೆ. ಇದ್ದುದರಲ್ಲಿಯೇ ಸಂತೃಪ್ತರಾಗಿ ಜೀವನವನ್ನು ನಡೆಸಿದರೆ ಮಾತ್ರ ಸುಖವಾಗಿ ಬಾಳಬಹುದು ಎಂಬುದೇ ಈ ಪಾಠದ ಆಶಯವಾಗಿದೆ.)





ಗಿರಿಜಾಬಾಯಿ ನಮ್ಮಮ್ಮನ ಮನೆಯಲ್ಲಿ ಅಡುಗೆಯವರು. ಸದಾ ನಗುನಗುತ್ತಾ ಕೆಲಸ ಮಾಡುವ ಅವರು ಎಂದಿಗೂ ತಮ್ಮ ಸ್ವಂತ ವಿಷಯ ಹೇಳುತ್ತಿರಲಿಲ್ಲ. ಸದಾ ಚೀಟಿ ಸೀರೆಯನ್ನೇ ಉಟ್ಟರೂ ಪೀತಾಂಬರವೋ ಎಂಬಂತೆ ಸಂತೋಷದಿಂದಿರುತ್ತಿದ್ದರು. ತಲೆಯಲ್ಲಿ ಯಾವಾಗಲೂ ಹೂ ನಗುತ್ತಿದ್ದವು. ತೃಪ್ತಿಯ ಕಳೆ ಮುಖದ ಮೇಲೂ ಕುಣಿಯುತ್ತಿತ್ತು. ಕೆಲಸ ಮಾಡುವಾಗ ದೇವರ ನಾಮವನ್ನೋ, ಕನ್ನಡ ಸಿನಿಮಾದ ಹಾಡುಗಳನ್ನೋ ಗುನುಗುನಿಸುತ್ತಿದ್ದರು. ನಮ್ಮ ಮನೆಯಲ್ಲಿ ಬೇಕಾದಷ್ಟು ಕೆಲಸವಿದ್ದರೂ ಒಂದು ಚೂರೂ ಬೇಸರಿಸದೆ ಕೆಲಸ ಮಾಡುತ್ತಿದ್ದರು. ಗೊಣಗುವುದಂತೂ ಗಾವುದ ದೂರವಿತ್ತು. ಅವರ ವೈಯಕ್ತಿಕ ಜೀವನದ ಕೆಲ ಅಂಶ ಮಾತ್ರ ನಮಗೆ ಗೊತ್ತಿದ್ದವು. ಗಂಡ ಅವರನ್ನು ಬಿಟ್ಟಿದ್ದ. ಒಬ್ಬನೇ ಮಗ ಶಾಲೆಯಲ್ಲಿ ಕಲಿಯುತ್ತಿದ್ದ. ಇವರಿಗೆ ಹೆಚ್ಚಿನ ವಿದ್ಯಾಭ್ಯಾಸವಿಲ್ಲದ್ದರಿಂದ, ನಮ್ಮ ಊರು ಸಣ್ಣ ಊರಾಗಿದ್ದರಿಂದ, ಉದ್ಯೋಗದ ಅವಕಾಶಗಳು ಕಡಿಮೆ ಇದ್ದವು. ಹೀಗಾಗಿ ಅವರು ಅಡುಗೆ ಕೆಲಸವನ್ನು ಅವಲಂಬಿಸಬೇಕಾಯಿತು.

ವಸಂತರಾವ್ ನಮ್ಮ ಕುಟುಂಬದ ಸ್ನೇಹಿತರು. ಬೆಂಗಳೂರಿನಲ್ಲಿಯ ಮಲ್ಟಿನ್ಯಾಷನಲ್ ಕಂಪನಿಯಲ್ಲಿ ಹಿರಿಯ ಹುದ್ದೆಯಲ್ಲಿದ್ದರು. ಅವರಿಗೆ ಒಂದು ಗಂಡು ಒಂದು ಹೆಣ್ಣು ಮಕ್ಕಳಿದ್ದರು. ಬೆಂಗಳೂರಿನ ಜಯನಗರದಲ್ಲಿ ದೊಡ್ಡ ಬಂಗಲೆ ಕಟ್ಟಿ ಒಳ್ಳೆಯ ಸೌಕರ್ಯದಲ್ಲಿದ್ದರು. ಯಾರಾದರೂ ಅಸೂಯೆ ಪಡುವಂಥ ಸುಂದರ ಸಂಸಾರ ಅವರದಾದರೂ ಮುಖದಲ್ಲಿ ಸಂತೋಷದ ಕಳೆಯೇ ಇರಲಿಲ್ಲ.

"ನನ್ನ ಮಗ ಅವಿನಾಶ್ ಈಗ ಹನ್ನೆರಡನೇ ಕ್ಲಾಸಿನಲ್ಲಿದ್ದಾನೆ. ಚೆನ್ನಾಗಿ ಓದುತ್ತಾನೋ ಇಲ್ಲವೋ ಎಂದು ಚಿಂತೆಯಾಗಿದೆ".

ಅವಿನಾಶ್ ಉತ್ತಮ ವಿದ್ಯಾರ್ಥಿಯಾಗಿದ್ದು ಚೆನ್ನಾಗಿ ಓದುತ್ತಿದ್ದ. ಆದ್ದರಿಂದ ನನಗೆ ವಸಂತರ ಮಾತು ಅಚ್ಚರಿ ತಂದಿತು.

"ನೀವೇಕೆ ಅವಿನಾಶನ ಬಗ್ಗೆ ಯೋಚನೆ ಮಾಡ್ತೀರಿ? ಖಂಡಿತವಾಗಿಯೂ ಅವನಿಗೆ ಒಳ್ಳೆಯ ಕಾಲೇಜಿನಲ್ಲಿ ಸೀಟು ಸಿಗುತ್ತೆ".

"ಅವಿನಾಶ್ ಐಐಟಿಯಲ್ಲಿಯೇ ಓದಬೇಕು ಇಲ್ಲಾಂದ್ರೆ ಓದಿ ಏನು ಪ್ರಯೋಜನ"? ವಸಂತ ನಿಟ್ಟುಸಿರಾದರು.

ಇಂದಿನ ಸ್ಪರ್ಧಾತ್ಮಕ ಜಗತ್ತಿನಲ್ಲಿ ಮಕ್ಕಳಿಗೆ ಇಂತಹುದೇ ಕಾಲೇಜಿನಲ್ಲಿ ಸೀಟು ಸಿಕ್ಕಬೇಕೆಂದು ಒತ್ತಾಯ ತರುವುದು ತೀರಾ ತಪ್ಪು ಕೆಲಸ. ಅದರಿಂದ ಮಕ್ಕಳ ಮನಸ್ಸಿಗೆ ಒತ್ತಡ ಹೇರಿದಂತಾಗುತ್ತದೆ. ಲಕ್ಷಾಂತರ ವಿದ್ಯಾರ್ಥಿಗಳು ಐಐಟಿ ಪರೀಕ್ಷೆ ಕಟ್ಟಿದ್ದರೂ ಕೆಲವೇ ಸಾವಿರ ಮಕ್ಕಳಿಗೆ ಅಲ್ಲಿ ಓದಲಾಗುತ್ತದೆ. ಒಂದು ಅಂಕದ ಅಂತರದಲ್ಲಿ ಎಷ್ಟೋ ಜನ ಪ್ರವೇಶ ಕಳೆದುಕೊಳ್ಳುತ್ತಾರೆ. ಈ ಅಂಕ ವ್ಯತ್ಯಯ ಪರೀಕ್ಷಾ ಒತ್ತಡದಿಂದ ಆಗಿರಬಹುದು! ಅಲ್ಲದೇ ಜೀವನದಲ್ಲಿ ಮುಂದೆ ಬರಲು ಐಐಟಿಗೇ ಹೋಗಬೇಕೆಂಬ ನಿಯಮವಿಲ್ಲ. ಇದೆಲ್ಲ ವಸಂತರಾಯರಿಗೂ ಗೊತ್ತು. ಆದರೂ ಅವರ ಮನ ಮತ್ತು ಮಾತು ಹೇಳಿದ್ದನ್ನೇ ಹೇಳುತ್ತಿದ್ದವು.



ವಸಂತರಾವ್ ಮತ್ತೊಮ್ಮೆ ಬಂದಿದ್ದಾಗ ಅವರ ಮುಖ ಇನ್ನೂ ಕಳೆಗುಂದಿತ್ತು. "ಜೆ.ಪಿ ನಗರದಲ್ಲಿ ಹೋದ ವರ್ಷ ಒಂದು ಫ್ಲಾಟ್ ಕೊಂಡುಕೊಳ್ಳಬೇಕೆಂದಿದ್ದೆ. ಆಗ ಅದರ ಬೆಲೆ ಮೂವತ್ತು ಲಕ್ಷ, ಈಗ ಅದರ ಬೆಲೆ ಐವತ್ತು ಲಕ್ಷ ಆಗಿದೆ. ನನಗೆ ಎಷ್ಟೊಂದು ಹಾನಿಯಾಗಿದೆ. ಈ ಇಪ್ಪತ್ತು ಲಕ್ಷ ಎಲ್ಲಿಂದ ತರಲಿ?". "ನಿಮಗೆ ಜಯನಗರದಲ್ಲಿ ಒಂದು ಮನೆ ಇದೆಯಲ್ಲಾ, ಜೆ.ಪಿ ನಗರದ ಸುದ್ದಿ ಬಿಟ್ಟುಬಿಡಿ. ಬೆಲೆ ಏರುತ್ತಿರುವ ಬೆಂಗಳೂರಿನಲ್ಲಿ ಪ್ರತಿ ವರ್ಷವು ಭೂಮಿಯ ಬೆಲೆ ಗಗನ ಮುಟ್ಟುತ್ತಿದೆ".

ವಸಂತರಾವ್ ನನ್ನ ಮಾತಿನಿಂದ ಸಮಾಧಾನಗೊಳ್ಳಲಿಲ್ಲ. ಅವರು ಬಯಸಿದ ಫ್ಲಾಟ್‌ನ ಬೆಲೆ ಮಾತ್ರ ಏರಿದೆಯೇನೋ ಎಂದು ಕಳವಳಗೊಂಡರು.

ಇನ್ನಾರು ತಿಂಗಳ ನಂತರ ವಸಂತರಾವ್ ನಮ್ಮಲ್ಲಿಗೆ ಭೇಟಿಯಿತ್ತರು. ಈ ಬಾರಿ ಆತ ತೀರಾ ಇಳಿದು ಹೋಗಿದ್ದರು.

"ಬೆಂಗಳೂರಿನಲ್ಲಂತೂ ಇರಲು ಅಸಾಧ್ಯವಾಗಿದೆ. ಇಲ್ಲಿ ಮದ್ರಾಸಿಗಿಂತಲೂ ಸೆಖೆ ಹೆಚ್ಚಿದೆ. ನಾವು ಚಿಕ್ಕವರಿದ್ದಾಗ ಬೆಂಗಳೂರು ಒಂದು ಗಿರಿಧಾಮದ ಹಾಗೆ ಇದ್ದಿತು. ಆದರೆ ಈಗ ಏರ್ ಕಂಡೀಷನ್ ಇಲ್ಲದೆ ಇರಲಾಗುವುದಿಲ್ಲ ಎಂಥಹ ಕಾಲ ಬಂದಿತಪ್ಪಾ" ಎಂದರು.

ವಿಶ್ವದ ಎಲ್ಲಾದೇಶದಲ್ಲೂ ಈಗ ಬಿಸಿ ಹೆಚ್ಚಿದೆ. ಇದಕ್ಕೆ ಬೆಂಗಳೂರು ಹೊರತಲ್ಲ. ಅಲ್ಲದೆ ಏರುತ್ತಿರುವ ಜನಸಂದಣಿಯಿಂದ, ಬಹುಮಹಡಿ ಕಟ್ಟಡಗಳಿಂದ, ವಾಹನಗಳ ಗದ್ದಲದಿಂದ ಸೆಖೆ ಹೆಚ್ಚಾಗಿರುವುದು ಸಾಮಾನ್ಯ. ಆದರೆ ವಸಂತರಾಯರಿಗೆ ಹೇಳುವವರು ಯಾರು? ಒಂದು ದಿನ ನನ್ನ ಅಮ್ಮನ ಮನೆಯಲ್ಲಿ ನಾನು ಮತ್ತು ಗಿರಿಜಾಬಾಯಿ ಇಬ್ಬರೇ ಉಳಿದಿದ್ದೆವು. ಮನೆಯ ಇತರ ಸದಸ್ಯರು ಜಾತ್ರೆಗೆಂದು ಬೇರೆ ಊರಿಗೆ ಹೋಗಿದ್ದರು. ನಾನು ಗಿರಿಜಾಬಾಯಿಯನ್ನು ಸುಮ್ಮನೆ ಕೇಳಿದೆ. "ಗಿರಿಜಾಬಾಯಿ ನಿಮ್ಮ ಗಂಡ ಎಲ್ಲಿರುತ್ತಾರೆ? ಮಗನ್ನ ನೋಡ್ಲಿಕ್ಕೆ ಒಮ್ಮೆಯೂ ಬಂದಿಲ್ವಾ?"

ಗಿರಿಜಾಬಾಯಿ ಒಂದು ನಿಮಿಷ ಮೌನವಾದರು. ನಂತರ ನಗುತ್ತಾ "ನಿಮ್ಮನೀ ಎದುರ್‌ಗೆ ಶಂಕರ ಪಾಟೀಲ್ರದು ಮನೀ ಅದಲ್ರೀ, ಅವರ ಡ್ರೈವರ್ ವಿರೂಪಾಕ್ಷನ ನನ್ನ ಗಂಡ. ಅವ ಇನ್ನೊಂದು ಲಗ್ನ ಆಗಿ ಉಣಕಲ್ಲಗ ಮನಿ ಮಾಡ್ಯಾನ್ರಿ"

ಅವರ ಮಾತು ನನಗೆ ಕೆಂಡ ಮುಟ್ಟಿದಂತಾಯ್ತು. ಏನು! ಗಿರಿಜಾಬಾಯಿ ಪ್ರತಿದಿನ ತನ್ನ ಗಂಡನನ್ನೂ ಸವತಿಯನ್ನೂ ನೋಡುತ್ತಾರಾ?

"ನಿಮಗೆ ಸಿಟ್ಟುಬರಂಗಿಲ್ಲೇನು ಗಿರಿಜಾಬಾಯಿ?"

"ಊಂ ಮೊದಲ ಮೊದಲ ಬರ್ತಿತ್ತು. ಆದರ ಈಗೀಗ ಬರಂಗಿಲ್ಲ. ನನಗ ದೇವ್ರು ಏನು ಕಡಿಮೆ ಮಾಡಿದ್ದಾನ್ರಿ? ನನ್ನ ಮಗ ಗಣೇಶ ಸಾಲ್ಯಾಗ ಒಂದನೇ ನಂಬರ್ ಬರ್ತಾನ. ಅಲ್ಲದಾನ ನಿಮ್ಮವ್ವ ಭಾಳ ಭೋಲೋ ಹೆಂಗ್ಸು. ನಿಮ್ಮನೀ ಔಟ್ ಹೌಸ್ ಇರ್ಲಿಕ್ ಕೊಟ್ಟಾರ. ಹೊಟ್ಟೆ ನೆತ್ತಿ ನೋಡ್ಕೋತಾರ. ನಂಗ ಭಾಳ ಮಕ್ಕಳಿದ್ದಿದ್ರ ಎದಿ ಒಡೀತಿತ್ತು ಈಗ ನಾ ಆರಾಮ ಇದ್ದೇನಿ ನೋಡ್ರಿ"

"ಅಲ್ರೀ ಗಿರಿಜಾಬಾಯಿ. ಮುಂದಿನ ನಿಮ್ಮ ಜೀವನ ಹೆಂಗ?"

"ಅದ್ರ ಕಾಳಜಿ ಈಗ ನಾಯಾಕ ಮಾಡ್ಲಿ? ಗಣೇಶ ಭೋಲೋ ಕಲ್ತು ಮುಂದ ಬರ್ತಾನ ಅನ್ನೋ ವಿಶ್ವಾಸ ನಂಗದ. ಅವ ತನ್ನ ವಾರಿಗಿ ಹುಡುಗರಿಗಿಂತ ಹೆಚ್ಚು ಗಂಭೀರ ಅದಾನ. ನನ್ನ ಕಷ್ಟ ನೋಡಿದ್ದಕ್ಕ ನನ್ನ ಬಗ್ಗೆ ಭಾಳ ಪ್ರೀತಿ ಇದೆ. ಬೇಜವಬ್ದಾರಿ ಅಪ್ಪ ಇರೋದ್ರಿಂದ ನನ್ನ ಮಗ ಸಣ್ಣ ವಯಸ್ನಾಗ ಜವಾಬ್ದಾರಿ ಹೊತ್ತಾನ. ನಾ ಏನೂ ನಿಮ್ಮ ಹಾಂಗ ಭಾಳ ಸಾಲಿ ಕಲ್ತಿಲ್ಲ. ಆದ್ರ ಒಂದು ಮಾತು ನನಗೆ ಗೊತ್ತದರಿ. ಜೀವನದಾಗ ಆನಂದದಿಂದ ಇರಬೇಕಂದ್ರ ದೇವರು ನಮಗೇನು ಕೊಟ್ಟಾನ ಅದ್ರಲ್ಲೇ ಸುಖ ಕಾಣಬೇಕ್ ಹೊರ್ತು ಇಲ್ಲದ್ದನ್ನ ನೆನೆದು ಹೈರಾಣ ಆಗಬಾರ್ದು"

ಕೂಡಲೇ ನನ್ನ ಮನಸ್ಸು ವಸಂತರಾವ್–ರನ್ನು ನೆನೆಯಿತು. ಎಲ್ಲವೂ ಇದ್ದು ಸದಾಕಾಲವೂ ದುಃಖ ಪಡುವ ಅವರು ಕೇವಲ ಅಡುಗೆಯವರಾದರೂ ಮನಸ್ಸು ಮುದವಾಗಿಟ್ಟುಕೊಂಡ ಗಿರಿಜಾಬಾಯಿ ಇವರಿಬ್ಬರ ನಡುವೆ ಎಷ್ಟೊಂದು ಅಂತರ? ಗಿರಿಜಾಬಾಯಿ ಅನಂದದ ಗುಟ್ಟನ್ನು ಸರಳವಾಗಿ ಹೇಳಿದ್ದರು.

ಇತ್ತೀಚೆಗೆ 'ಬಾಸ್ಟನ್'ನಲ್ಲಿರುವ ಹಾರ್ವರ್ಡ್ ಕಾಲೇಜಿನಲ್ಲಿ ಒಂದು ಉಪನ್ಯಾಸಕ್ಕೆ ಹೋಗಿದ್ದೆ. ಅಲ್ಲಿ ಮಹತ್ವವಾದ ಪಾಠವನ್ನು ಸರಳ ಭಾಷೆಯಲ್ಲಿ ಹೇಳಿದ್ದರು.

"ಜೀವನದಲ್ಲಿಯ ಸಂತೋಷ ನಿಮ್ಮ ಕೈಯಲ್ಲಿದೆ. ಅದನ್ನು ಹೊಂದಬೇಕಾದರೆ ನಿಮ್ಮನ್ನು ನೀವು ಕಂಡುಕೊಳ್ಳಬೇಕು."

ಈ ಪಾಠವನ್ನು ಹಾರ್ವರ್ಡ್ ಜನರು ಪಾಲಿಸುತ್ತಾರೋ ಇಲ್ಲವೋ ಗೊತ್ತಿಲ್ಲ, ಆದರೆ ಗಿರಿಜಾಬಾಯಿಯವರು ಇದು ಗೊತ್ತಿಲ್ಲದೆಯೇ ಪಾಲಿಸುತ್ತಿದ್ದರು.

**ಲೇಖಕಿಯ ಪರಿಚಯ:**



ಶ್ರೀಮತಿ ಸುಧಾಮೂರ್ತಿ ಪ್ರತಿಷ್ಠಿತ ಟೆಲ್ಕೋಗೆ ಪ್ರವೇಶ ಪಡೆದ ಮೊದಲ ಮಹಿಳಾ ಇಂಜಿನಿಯರ್. ಪ್ರಗತಿಪರ ಚಿಂತಕರೂ, ಸಾಮಾಜಿಕ ಕಳಕಳಿಯುಳ್ಳವರೂ ಆದ ಇವರು ಕನ್ನಡ ಹಾಗೂ ಇಂಗ್ಲಿಷ್ ಭಾಷೆಯಲ್ಲಿ ಸುಮಾರು ೨೪ ಕೃತಿಗಳನ್ನು ಸಾಹಿತ್ಯ ಲೋಕಕ್ಕೆ ನೀಡಿದ್ದಾರೆ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಅತ್ತಿಮಬ್ಬೆ ಪ್ರಶಸ್ತಿ, ಓಜಸ್ವಿನಿ ಪ್ರಶಸ್ತಿ ಮುಂತಾದ ಪ್ರಶಸ್ತಿಗಳಲ್ಲದೆ ೨೦೦೬ರಲ್ಲಿ ಪದ್ಮಶ್ರೀ ಪ್ರಶಸ್ತಿಯ ಗೌರವಕ್ಕೂ ಪಾತ್ರರಾಗಿದ್ದಾರೆ. ಈ ಪಠ್ಯಭಾಗವನ್ನು ಇವರ 'ಮನದ ಮಾತು' ಕೃತಿಯಿಂದ ಆರಿಸಲಾಗಿದೆ.

## ಓದಿ ತಿಳಿಯಿರಿ:

**ಪೀತಾಂಬರ–** ರೇಷ್ಮೆಯ ವಸ್ತ್ರ , **ಗುನುಗು–** ಮೆಲ್ಲನೆ ಧ್ವನಿ, **ಕಳೆಗುಂದು**–ಕಾಂತಿಹೀನವಾಗು, **ಗಗನ**–ಆಕಾಶ, **ಕಳವಳ–** ಗೊಂದಲ, **ಹೈರಾಣ–** ದಣಿವು , ಆಯಾಸ, **ಕಾಳಜಿ–** ಜೋಪಾನ, **ವಾರಿಗೆ–** ಸಮಾನ ವಯಸ್ಕರು

## ಗಮನಿಸಿ ತಿಳಿಯಿರಿ:

**ಐಐಟಿ** –ಇಂಡಿಯನ್ ಇನ್ಸ್ಟಿಟ್ಯೂಟ್ ಆಫ ಟೆಕ್ನಾಲಜಿ, ಕೆಲವೇ ಆಯ್ದ ನಗರಗಳಲ್ಲಿರುವ ಪ್ರತಿಷ್ಠಿತ ವಿಜ್ಞಾನ ತಂತ್ರಜ್ಞಾನದ ಉನ್ನತ ಶಿಕ್ಷಣ ಸಂಸ್ಥೆಗಳು,

**ಗಿರಿಧಾಮ** – ಬೆಟ್ಟದ ಮೇಲಿರುವ ತಂಪಾದ ಪ್ರದೇಶ,

**ಉಣಕಲ್ಲು** – ಹುಬ್ಬಳ್ಳಿಯ ಒಂದು ಪ್ರದೇಶ,

**ಬಾಸ್ಟನ್** – ಅಮೆರಿಕಾದ ಒಂದು ನಗರ



## ಅಭ್ಯಾಸ ಚಟುವಟಿಕೆ

**ಅ) ಕೆಳಗೆ ಕೊಟ್ಟಿರುವ ಪ್ರತಿಯೊಂದು ಪ್ರಶ್ನೆಗೂ ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.**

೧. ಗಿರಿಜಾಬಾಯಿ ಯಾರು?

೨. ವಸಂತರಾವ್ ಎಲ್ಲಿಕೆಲಸ ಮಾಡುತ್ತಿದ್ದರು?

೩. ಲೇಖಕಿ ಗಿರಿಜಾಬಾಯಿಯವರನ್ನು ಏನೆಂದು ಕೇಳಿದರು?

೪. ಗಿರಿಜಾಬಾಯಿ ಗಂಡನ ಹೆಸರೇನು?

೫. ಬಾಸ್ಟನ್‌ನ ಹಾರ್ವರ್ಡ ಕಾಲೇಜಿನಲ್ಲಿ ಲೇಖಕಿ ಕೇಳಿದ ಮಹತ್ವದ ಮಾತು ಯಾವುದು?

**ಆ) ಕೆಳಗೆ ಕೊಟ್ಟಿರುವ ಪ್ರತಿಯೊಂದು ಪ್ರಶ್ನೆಗೂ ಮೂರು ಅಥವಾ ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಗಿರಿಜಾಬಾಯಿಯವರ ಸ್ವಭಾವ ಹೇಗಿತ್ತು?

೨. ಗಿರಿಜಾಬಾಯಿ ತಮ್ಮ ಮಗನ ಬಗೆಗೆ ಇಟ್ಟುಕೊಂಡಿದ್ದ ನಂಬಿಕೆ ಏನು?

**ಇ) ಕೆಳಗೆ ಕೊಟ್ಟಿರುವ ಪ್ರತಿಯೊಂದು ಪ್ರಶ್ನೆಗೂ ಐದು ಅಥವಾ ಆರು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ವಸಂತರಾವ್ ಅವರ ಅತೃಪ್ತಿಗೆ ಕಾರಣಗಳೇನು? ವಿವರಿಸಿರಿ.

೨. ಮಕ್ಕಳ ಮನಸ್ಸಿನ ಮೇಲೆ ಪೋಷಕರು ಹೇರುವ ಒತ್ತಡದ ಬಗ್ಗೆ ಲೇಖಕಿಯ ಅಭಿಪ್ರಾಯ ತಿಳಿಸಿ.

**ಈ) ಸಂದರ್ಭದೊಡನೆ ವಿವರಿಸಿರಿ.**

೧. ಚೆನ್ನಾಗಿ ಓದುತ್ತಾನೋ ಇಲ್ಲವೋ ಎಂದು ನನಗೆ ಚಿಂತೆಯಾಗಿದೆ.

೨. ನಾ ಏನೂ ನಿಮ್ಮ ಹಾಂಗ ಭಾಳ ಸಾಲಿ ಕಲ್ತಿಲ್ಲ

೩. ಇಲ್ಲದ್ದನ್ನು ನೆನೆದು ಹೈರಾಣ ಆಗಬಾರ್ದು

೪. ಜೀವನದಲ್ಲಿಯ ಸಂತೋಷ ನಿಮ್ಮ ಕೈಯಲ್ಲಿದೆ

**ಉ) ಹೊಂದಿಸಿ ಬರೆಯಿರಿ**

| ಅ | ಆ |
|---|---|
| ೧. ವಸಂತರಾವ್ | ಬಾಸ್ಟನ್ ನಗರ |
| ೨. ಹಾರ್ವರ್ಡ್ ಕಾಲೇಜ್ | ಗಿರಿಜಾಬಾಯಿಯ ಮಗ |
| ೩. ಗಣೇಶ | ಲೇಖಕಿಯ ಕುಟುಂಬದ ಸ್ನೇಹಿತರು |
| ೪. ವಿರೂಪಾಕ್ಷ | ಹಬ್ಬ |
| | ಡ್ರೈವರ್ |



**ಊ) ಕೆಳಗೆ ಕೊಟ್ಟಿರುವ ಉದಾಹರಣೆಯನ್ನು ಗಮನಿಸಿರಿ.**

ಉದಾ: ಕಾಲಿಗೆ ಬುದ್ಧಿ ಹೇಳಿದರು– ಪೋಲೀಸರನ್ನು ಕಂಡ ಕಳ್ಳರು ಕಾಲಿಗೆ ಬುದ್ಧಿ ಹೇಳಿದರು. ಇದರಂತೆ ಈ ಕೆಳಗೆ ಕೊಟ್ಟಿರುವ ನುಡಿಗಟ್ಟುಗಳನ್ನು ಬಳಸಿ ವಾಕ್ಯಗಳನ್ನು ರಚಿಸಿರಿ.

೧, ಎತ್ತಿದ ಕೈ ೨. ತಲೆಹಾಕು ೩. ರೈಲುಬಿಡು

**ಎ) ಇವುಗಳನ್ನು ಬಿಡಿಸಿ ಬರೆಯಿರಿ.**

ಅಸಾಧ್ಯವಾಗಿದೆ. ಇರಲಾಗುವುದಿಲ್ಲ. ಪಕ್ವಾಂತರ. ವಿದ್ಯಾಭ್ಯಾಸ. ಪಿತಾಂಬರ.

**ಏ) ಈ ಕೆಳಗೆ ನೀಡಲಾಗಿರುವ ಆಡುಭಾಷೆಯ ಪದಗಳಿಗೆ ಗ್ರಾಂಥಿಕ ಪದಗಳನ್ನು ಬರೆಯಿರಿ.**

ನೋಡ್ಲಿಕ್ಕೆ. ಮಾಡ್ಯಾನ. ಅಲ್ಲದಾನ. ಭಾಳ. ಹೊರ್ತು.

## ಪ್ರಾಯೋಗಿಕ ಚಟುವಟಿಕೆ

೧. **'ಹಾಸಿಗೆ ಇದ್ದಷ್ಟು ಕಾಲು ಚಾಚು'** –ಈ ಗಾದೆಯ ಮಾತಿನ ಹಿನ್ನೆಲೆಯಲ್ಲಿ ಪ್ರಸ್ತುತ ಪಾಠದ ನೀತಿಯನ್ನು ತಿಳಿಯಿರಿ.

೨. ಸುಧಾಮೂರ್ತಿಯವರ ಇತರ ಕೃತಿಗಳನ್ನು ಓದಿರಿ.

**ಇರುವ ಭಾಗ್ಯವ ನೆನೆದು ಬಾರೆನೆಂಬುದನು ಬಿಡು, ಹರುಷಕದೆ ದಾರಿ ಮಂಕುತಿಮ್ಮ**

# ಪದ ಕೋಶ

**ಅ**

ಅಂಬಿಗ – ದೋಣಿ ನಡೆಸುವವ
ಅಕಾಲಿಕ – ಕಾಲವಲ್ಲದ ಕಾಲ
ಅಜೇಯ – ಗೆಲ್ಲಲಾಗದ
ಅಧಿಕ – ಹೆಚ್ಚು
ಅದೃಷ್ಟ – ಭಾಗ್ಯ
ಅಧ್ಯಾರೋಪ– ಊಹಿಸಿ ತಿಳಿದುಕೊಳ್ಳುವುದು
ಅಧ್ವಾನ – ತೊಂದರೆ, ಹದಗೆಟ್ಟ
ಅನಾಮತ್ತು – ಇಡಿಯಾಗಿ, ಪೂರ್ತಿಯಾಗಿ
ಅನುಚರ – ಹಿಂಬಾಲಕ
ಅನ್ವೇಷಣೆ – ಹುಡುಕುವುದು
ಅಪ್ಪಣೆ – ಅನುಮತಿ, ಒಪ್ಪಿಗೆ
ಅಭ್ಯಂತರ – ಅಡ್ಡಿ
ಅರಣ್ಯ – ಕಾಡು
ಅರಸ – ರಾಜ
ಅವಮರ್ಯಾದೆ – ಅಪಮಾನ
ಅವಲಂಬಿಸು – ಆಶ್ರಯಿಸು
ಅಸುರ – ರಾಕ್ಷಸ
ಅಳಿಸು – ನಾಶಪಡಿಸು

**ಆ**

ಆಘ್ರಾಣಿಸು– ವಾಸನೆ ನೋಡು, ಮೂಸಿನೋಡು
ಆಪತ್ಕಾಲ – ಕಷ್ಟದ ಕಾಲ
ಆಪಾದಮಸ್ತಕ – ಕಾಲಿನಿಂದ ತಲೆಯವರೆಗೆ
ಆರಭ್ಯ – ಪ್ರಾರಂಭ ( ಇಂದ )
ಆಲಿಸು – ಕೇಳು

**ಇ**

ಇಂಗಿತ – ಆಶಯ
ಇಂಪು – ಮಧುರ, ಕಿವಿಗೆ ಹಿತವಾದ
ಇಚ್ಛೆ – ಇಷ್ಟ
ಇನಿಯ – ಪ್ರೇಮಿ
ಇರುಳು – ರಾತ್ರಿ

**ಉ**

ಉಂಬು – ಊಟಮಾಡು
ಉದರ – ಹೊಟ್ಟೆ
ಉದಾತ್ತ – ಶ್ರೇಷ್ಠವಾದ
ಉನ್ನತ – ಮೇಲುಮಟ್ಟದ, ಶ್ರೇಷ್ಠ
ಉಲ್ಲಾಸ – ಸಂತೋಷ
ಉಲಿ – ಧ್ವನಿ, ಮಾತು

**ಊ**

ಊದಾಬಣ್ಣ – ಬೂದುಬಣ್ಣ

**ಎ**

ಎರವಲು – ಸಾಲ

**ಏ**

ಏಳ್ಗೆ – ಅಭಿವೃದ್ಧಿ

**ಒ**

ಒಮ್ಮತ – ಒಂದೇ ಅಭಿಪ್ರಾಯ

**ಓ**

ಓಗರ – ಅನ್ನ
ಓಲಗ – ಸಭೆ

**ಕ**

ಕಂದ – ಮಗು
ಕಂದಾಚಾರ – ಮೂಢಸಂಪ್ರದಾಯ
ಕಗ್ಗ – ಕಾವ್ಯ, ಕೆಲಸಕ್ಕೆ ಬಾರದ,
ಕಡಿದಾಡು – ಜಗಳವಾಡು
ಕಬಂಧ – ಮುಂಡ, ತಲೆಯಿಲ್ಲದ ದೇಹ

ಕವಚ – ಹೊದಿಕೆ

ಕಳಚು – ಬಿಚ್ಚು

ಕಾತುರ – ಆತುರ, ಉತ್ಸುಕತೆ

ಕಾರಂಜಿ – ಚಿಲುಮೆ

ಕಾಳಜಿ – ಜೋಪಾನ

ಕುಡುಗೋಲು – ಕೊಯ್ಯುವ ಸಾಧನ

ಕುಪಿತ – ಕೋಪಗೊಂಡ

ಕೂಲಂಕಷ – ಸಮಗ್ರ

ಕೋಮಲ – ಸೂಕ್ಷ್ಮ

**ಖ**

ಖಜಾಂಚಿ – ಹಣಕಾಸಿನ ಮೇಲ್ವಿಚಾರಕ

ಖಿನ್ನ – ಬಳಲಿದ

ಖೇದಗೊಳ್ಳು – ದುಃಖಪಡು

**ಗ**

ಗುಜ್ಜಿ – ಚಿಕ್ಕ ಮಗು

ಗುಡಿ – ದೇವಸ್ಥಾನ

ಗೊಡ್ಡು – ಫಲವಿಲ್ಲದ, ಬಂಜೆ

ಗುಣಿ – ತಗ್ಗು, ಗುಂಡಿ

ಗರ್ವ – ಅಹಂಕಾರ

ಗೋಳು – ಕಷ್ಟ

**ಚ**

ಚದುರಿಸು – ಸರಿಸು

ಚಿಗುರು – ಕುಡಿ, ಮೊಳಕೆ

ಚೂಡಾಮಣಿ – ಒಂದು ರತ್ನ

**ಜ**

ಜಿಹ್ವೆ – ನಾಲಗೆ

**ತ**

ತಗಲ್ಯಾವು – ತಗಲುತ್ತವೆ

ತಬ್ಬಿಬ್ಬಾಗು – ದಿಗ್ಭ್ರಮೆಗೊಳ್ಳು, ಕಕ್ಕಾವಿಕ್ಕಿಯಾಗು

ತಲಿಬ್ಯಾನಿ – ತಲೆನೋವು

ತಲಾಂತರ – ಬಹಳ ವರ್ಷಗಳಿಂದ, ತಲೆಮಾರುಗಳಿಂದ

ತಿರಿ – ಭಿಕ್ಷೆಬೇಡು

ತಿರೋಹಿತ – ಮರೆಯಾಗು

ತೇಜೋವಧೆ – ಅವಮಾನ, ಮುಖಭಂಗ

ತೊಡು – ಧರಿಸು

ತೊಡುಗೆ – ತೊಡುವ ವಸ್ತು ವಿಶೇಷಗಳು

ತೊತ್ತು – ಸೇವಕಿ/ ಸೇವಕ

ತ್ಯಜಿಸು – ಬಿಡು

**ದ**

ದಡ – ದಂಡೆ

ದಿಗಿಲು – ಭಯ

ದಿಬ್ಬಣ – ಮದುವೆಯ ಮೆರವಣಿಗೆ

ದ್ವೀಪ – ನೀರಿನಿಂದ ಸುತ್ತುವರಿದ ಭೂಭಾಗ

ದ್ಯೋತಕ – ಸಾಕ್ಷಿ, ಗುರುತು

**ಧ**

ಧನ – ಹಣ

ಧಿಕ್ಕರಿಸು – ತಿರಸ್ಕರಿಸು

ಧೂರ್ತ – ಮೋಸಗಾರ

ಧೋತ್ರ – ಪಂಚೆ

**ನ**

ನಂಜು – ವಿಷ

ನಂಟು – ಸಂಬಂಧ

ನರುಗಂಪು – ಸುವಾಸನೆ

ನರಳು – ಸಂಕಟಪಡು

ನಿಗೂಢ – ಗೋಪ್ಯ, ಅಡಗಿದ

ನಿರಾಶೆ – ಈಡೇರದ ಆಸೆ

ನಿರ್ಗತಿಕ – ಗತಿಯಿಲ್ಲದ

ನಿರ್ಲೇಪ – ಅಂಟಿಕೊಳ್ಳದ

ನಿಶ್ಚಲ– ಚಲನೆಯಿಲ್ಲದ

ನೀಗು – ಹೋಗಲಾಡಿಸು

ನೌಕೆ – ಹಡಗು, ನಾವೆ

**ಪ**

ಪಂಜರ – ಪ್ರಾಣಿ–ಪಕ್ಷಿಗಳನ್ನು ಬಂಧಿಸಿಡುವ ಗೂಡು

ಪಾವನ – ಪವಿತ್ರ

ಪಾವಟಿಗೆ – ಮೆಟ್ಟಿಲು

ಪ್ರಿಯ – ಇಷ್ಟವಾದ

ಪೀತಾಂಬರ – ರೇಶ್ಮೆಬಟ್ಟೆ

ಪುರುಸೊತ್ತು – ಬಿಡುವು, ವಿರಾಮ

ಪೆಂಪು – ಸೊಗಸು

ಪೋಕರಿ – ಪುಂಡ

**ಫ**

ಫಲ – ಹಣ್ಣು, ಬೆಳೆ, ಲಾಭ

**ಬ**

ಬಂಧಿ – ಸೆರೆಯಾಳು

ಬಗೆ – ರೀತಿ, ಮನಸ್ಸು

ಬನ – ವನ, ಕಾಡು

ಬಸಿರು – ಗರ್ಭ, ಹೊಟ್ಟೆ

ಬಳಲು – ಆಯಾಸಗೊಳ್ಳು

ಬಿರುಕು – ಸೀಳು, ಒಡಕು

ಬೆಕ್ಕಸಬೆರಗಾಗು – ವಿಸ್ಮಯಗೊಳ್ಳು, ಆಶ್ಚರ್ಯಪಡು

ಬೆದರ್‍ಯಾವ – ಬೆದರುತ್ತವೆ

ಬೆಪ್ಪ – ದಡ್ಡ

ಬೆಸೆ – ಕೂಡಿಸು

ಬೆಳ್ಳಕ್ಕಿ – ಕೊಕ್ಕರೆ ಜಾತಿಯ ಹಕ್ಕಿ

ಬೇಟ – ಸೆಳೆತ, ಆಕರ್ಷಣೆ

**ಮ**

ಮಂಜು – ಹಿಮ, ಮಬ್ಬು, ಮಸುಕು

ಮಡುಗಟ್ಟು – ಆಳವಾದ ನೀರಿನಂತೆ ನಿಶ್ಚಲವಾಗಿ ನಿಲ್ಲು

ಮತ್ಸರ – ದ್ವೇಷ, ಹೊಟ್ಟೆಕಿಚ್ಚು

ಮಧ್ಯಾಣ – ಮಧ್ಯಾಹ್ನ

ಮಲಗ್ಯವನೆ – ಮಲಗಿದ್ದಾನೆ

ಮಾಟ – ಮಾದರಿ, ರೀತಿ

ಮಾತ್ಸರ್ಯ – ಹೊಟ್ಟೆಕಿಚ್ಚು

ಮ್ಲಾನತೆ – ಬೇಸರ

ಮಿತ್ರ – ಸೂರ್ಯ, ಗೆಳೆಯ

ಮುಗಿಲು – ಮೋಡ

ಮುಗುಳು – ಮೊಗ್ಗು

ಮೆದು – ಮೃದು

ಮೌಢ್ಯ – ದಡ್ಡತನ,

**ರ**

ರನ್ನ – ರತ್ನ

ರಹಸ್ಯ – ಗುಟ್ಟು

**ಲ**

ಲೇಸು – ಒಳ್ಳೆಯದು

**ವ**

ವನ – ಕಾಡು, ಅರಣ್ಯ

ವರ್ಧಿಸು – ಅಭಿವೃದ್ಧಿಹೊಂದು

ವಸುಮತಿ – ಭೂಮಿ

ವಾತ್ಸಲ್ಯ – ಪ್ರೀತಿ, ಮಮತೆ

ವಾರಿಗೆ – ಸಮವಯಸ್ಕ

ವಾಹಕ – ಸಾಗಿಸುವ ವಾಹನ

ವಿಕೃತಿ – ಕುರೂಪ

ವಿದಾಯ – ಬೀಳ್ಕೊಡುಗೆ

ವಿಶದ – ಸ್ಪಷ್ಟ

ವಿಸ್ಮಯ – ಆಶ್ಚರ್ಯ

ವೃಕ್ಷ – ಮರ

ವ್ಯತ್ಯಯ – ವ್ಯತ್ಯಾಸ

**ಶ**

ಶ್ಲಾಘಿಸು – ಹೊಗಳು

ಶುಭವಾರ್ತೆ – ಒಳ್ಳೆಯ ಸುದ್ದಿ

**ಸ**

ಸನ್ನಿಧಾನ – ಸಮೀಪ, ಎದುರು

ಸರಹದ್ದು – ಗಡಿ

ಸರಳು – ಕಂಬಿ

ಸರೋವರ – ಕೊಳ, ನೀರಿನ ತಾಣ

ಸಲಗ – ಬಲಿಷ್ಠವಾದ ಗಂಡಾನೆ

ಸವ್ಯಸಾಚಿ – ಏಕಕಾಲದಲ್ಲಿ ಎರಡೂ ಕೆಲಸಗಳನ್ನು ಮಾಡುವವ

ಸುಜ್ಞಾನಿ – ಉತ್ತಮ ಜ್ಞಾನಿ, ತಿಳಿದವ

ಸುದೈವ – ಅದೃಷ್ಟ, ಪುಣ್ಯ

ಸುಸಂಧಿ – ಒಳ್ಳೆಯ ಅವಕಾಶ

ಸೂರು – ಛಾವಣಿ ಮತ್ತು ಅದರ ಪಕ್ಕದ ಇಳಿಜಾರಾದ ಭಾಗ

ಸೃಜನ – ಸೃಷ್ಟಿ, ಹುಟ್ಟು

ಸೃಷ್ಟಿಗೊಡೆಯ – ಭಗವಂತ

ಸೈರಿಸು – ಸಹಿಸು

ಸೌಧ – ದೊಡ್ಡ ಕಟ್ಟಡ, ಮಹಲು

**ಹ**

ಹಂಬಲಿಸು – ಆಸೆಪಡು

ಹಮ್ಮು – ಗರ್ವ, ಅಹಂಕಾರ

ಹರವು – ಬಡಾವಣೆ

ಹಸನಿಲ್ಲದ – ಅನುಕೂಲವಿಲ್ಲದ

ಹುಸಿ – ಸುಳ್ಳು

ಹೇರಳ – ಬಹಳ

ಹೈರಾಣ – ದಣಿವು, ಆಯಾಸ

ಹೊಳ್ಳೆ – ಮೂಗಿನ ರಂಧ್ರ

ಹ್ಯಾಟು – ಒಂದು ಬಗೆಯ ಟೋಪಿ

* * *